## 35

ಅದೇ ಗ್ರಾಮದ ಬಸವಣ್ಣನ ಗುಡೀಗೆ ದಕ್ಷಿಣಕ್ಕೆ ನೆಟ್ಟ ಕಲ್ಲು.

ಪ್ರಮಾಣ 2' × 5'

1 ಪ್ಲವಂಗಸಂವತ್ಸರದಕಾರ್ತಿ
2 ಕಭಹುಳ ೧೧ ಲುಶ್ರೀಮತು
3 ಯಾಲಹಂಕನಾಡಪ್ರಭುಹಿರೀ
4 ಕೆಂಪೇಗೌಡರವರಪೌತ್ರರಾದ
5 ಯಿಂಮಡಿಕೆಂಪೇಗೌಡರವರಪು
6 ತ್ರರಾದಮುಂಮಡಿಕೆಂಪೇಗೌಡ
7 ರವರುಕಾಸಿಯುಲುಮಟವಂನು
8 ಕಟ್ಟಿಸಿಲಿಂಗಪ್ರತಿಷ್ಟೆಯಂನು
9 ಮಾಡಿಸಿಯಿಮಟದಧರ್ಮಕ್ಕೆಕೊ
10 ಟ್ಟಅಳುಲುಕುಪೆಗ್ರಾಮವಂನು
11 ವಿಶ್ವೇಶ್ವರಪ್ರೀತಿಯಾಗಿಕೊಟೆವು
12 ಇದೇದಾನಶಾಸನಅಕ್ಷಂ
13 ತಲಮುದುಭಟರಿಗೆ

## 36

ಅದೇ ಗುಡಿಯ ಪಾಣಿವಟ್ಟದ ಮೇಲೆ.

ಉತ್ತರಕಡೆ

1 ವಿರೋಧಿಸಉಸ್ಟರದಮಾರ್ಗಸಿರಸುಧ೫ಲು
2 ...ತುಕೊತ್ತಹಳ್ಳಸಂತೆಯಿಯುನಮಗಮ
3 ಡೆಣಯಗೆಯಿಸಿದಬಸವ

ಪೂರ್ವಕಡೆ

4 ಆರುಲಕುಪ್ಪೆರಾಮಯನಮೊಂ
5 ಮಗಸಂಭುಲಿಂಗಗೆಯಿ
6 ದಭಸವ

## 37

ಅದೇ ಹೋಬಳಿ ಹಲಸಬೇಲ ಗ್ರಾಮದ ಈಶ್ವರದೇವಸ್ಥಾನದಲ್ಲಿ.

ಪ್ರಮಾಣ 6' × 3'

(ಮೇಲ್ಭಾಗ ಹೋಗಿಧೆ)

1 ...............ಶಾಲಿವಾಹನಶ
2 ಕವರುಷಂಗಳು೧೬೫೮ನೆಯುಪರಿಧಾವಿಸಂವತ್ಸ
3 ರದಕಾರ್ತ್ತಿಕಶು೧೫ಶುಕ್ರವಾರದಲುಶ್ರೀಮ
4 ದ್ರಾಜಾಧಿರಾಜರಾಜಪರಮೇಶ್ವರಪ್ರೌಢಪ್ರತಾ
5 ಪಅಪ್ರತಿಮವೀರನರಪತಿಮಹೀಶೂರರತ್ನಸಿಂಹಾ
6 ಸನಾರೂಢರಾದಚಾಮರಾಜವೊಡೆಯರ್ಯೆಯ
7 ನವರು। ದೇವದೇವೋತ್ತಮದೇವತಾಸಾರ್ವಭೌಮೂ
8 ಖಿಳಾಂಡಕೋಟಿಬ್ರಂಹ್ಮಾಂಡನಾಯಕರಾಧಮ
9 .........ಚಾಮುಂಡೇಸ್ವರಿಯುಂಮನೆ
10 ವರದಿವ್ಯ.............
11 ...ರಾಜನಗರದ.........
12 ............ಮಾಡಿಸಿದರಾದಕಾರಣಯಿಗ್ರಾಪುಕ್ಕೆಸಲುಪ
13 ತುಸೀಮೆಯೊಳಗಾದನಿಧಿನಿಕ್ಷೇಪಜಲಪಾಷಾಣಅಕ್ಷೀ
14 ಣಿಆಗಾಮಿಸಿದ್ಧಸಾಧ್ಯಗಳೆಂಬ...............
15 ಸ್ವಾಮ್ಯ..................

(ಮುಂದೆ ಕಾಣುವದಿಲ್ಲ)

## 38

### ಅದೇ ಹೋಬಳಿ ಗೆಜ್ಜಗಾರಕುಪ್ಪೆ ಗ್ರಾಮದ ಊರಮುಂದೆ ಇರುವ ಶಿಲಾಶಾಸನದ ಪ್ರತಿ *

[1]ಸ್ವಸ್ತಿಸಮಸ್ತಭುವನಾಶ್ರಯಂ । ಪೃಥ್ವೀವಲ್ಲಭಂ । ಮಹಾರಾಜಾಧಿರಾಜಪರಮೇಶ್ವರಪರಮಭಟ್ಟಾರಕ | ಯಾದವಕುಲಾಂಬರಾ । ಸರ್ವಜ್ಞ । ಮಲೆರಾಜರಾಜ | ಮಲಪರಗಂಡಭೇರುಂಡ | ಕದನಪ್ರಚಂಡ । .ಅಸಹಾಯಶೂರಾ । ಯೇಕಾಂಗಿವೀರಾ । ಶನಿವಾರಸಿದ್ಧ ||ಕಡುಗಲಿಚಲದಾಂಕರಾಮ! ಚೋಳರಾಯಸ್ಥಾಪನಾಚಾರ್ಯ್ಯ । ಪಾಂಡ್ಯರಾಯಪ್ರತಿಷ್ಠಾಪನಾಚಾರ್ಯ್ಯವೈರಿರಾಯಮಸ್ತಕಶೂಲಜಗದೇಕಮಲ್ಲ । ನೇಪಾಳಪಲ್ಲಾ | ವಾಛ್ಸಲ್ಯಾ ! ತ್ರಿನಿಹೇತ್ರಜವನಿಕೆನಾರಾಯಣಪುರಿವರಗಂಡ| ಕೊಟಂಜೀಕೊಂಬಭರಗಂಡಾ| ಅವರಜವರಾ | ಪ್ರತಾಪನಾರಶಿಂಹ್ಯಾರಾಯರವರಕೊಮಾರಹೊಗಳಬಲ್ಲಾಳರಾಯನುಪೃಥ್ವೀರಾಜ್ಯಂಗೈವುತ್ತಿರ್ದಲ್ಲಿ । ಶಖವರುಷ ೧೦ . .ನೇನಳಸಂವತ್ಸರದಕಾರ್ತಿಕಶುಶ ಲ್ಲುಕ್ಕೈವಾರವೀರು । ಕೈವಾರಕರಾ | ನಿಶ್ಯಂಖಮಲ್ಲುಕ್ಕೈವಾರಕರಾತ್ತಾಟೋದಕಾ । ವಿದ್ಯಾರಾಜಭಟು | ಶೃಂಗಾರಜಾರು । ಕವುಂಡಲ್ಯವಂಶೋದ್ಭವಸಾಖ್ಯತೆಗಣಕೆಕೊಟ್ಟದು । ಆನೆತಾಪಡದು । ಕೋಡುಬಲ್ಲಾಳರಾಯ್ಯ । ಅತಿಶ್ಯಂಖಕ್ಷಿತಿಕೀರ್ತಿತೋವಂಗತ । ಆಬಲ್ಲಾಳದೇವನುತ್ಯಾಗವಾಗಿಕೊಟ್ಟಸ್ಥಳಂ । ಗಜಗಾರಗುಪ್ಪೆಸ್ಥಳಕ್ಷೇತ್ರಯೆಲೆವಳಗೆಯಿರತ್ಕಕನೆಕವಣೆಕಜಲತರುತ್ಯಾಗವಾತಪ್ಪಿದರೆವಾರಣಾಶಿಯಲ್ಲಿಕವಿಲೆಯಕೊಂದಪಾತಕ್ಕೆಹೋದವರೂ ! ಕತ್ತಿಯನೇರಿಕಳ್ಳಕೂಟವಕೊಡುವರೂ | ಸುರಾಪಾನಮಾಡಿದವರೂಯಿಂತಪುದಕ್ಕೆಚಂದ್ರಸೂರ್ಯರುಳ್ಳನಕಕೊಟಶಿಲಾಶ್ಯಾಸನಾ

## 39

### ಅದೇ ಗ್ರಾಮದ ಊರುಮುಂದೆ ವಿದ್ಯೆರಾಜನ ಜಗತೀ ಕಟ್ಟೆಯ ಮೇಲೆ ನೆಟ್ಟ ಕಲ್ಲು.

ಪ್ರಮಾಣ 6 0 × 4 2

[1]ಶ್ರೀಸ್ವಸ್ತಿಸಮಸ್ತಭುವನಾಶ್ರಯಶ್ರೀಪೃಥ್ವೀವಲ್ಲಭಮಹಾರಾಜಾಧಿರಾಜಪರಮೇ
[2]ಶ್ವರಪರಮಭಟ್ಟಾರಯಾದವಕುಳಾಂಬರದ್ಯುಮಣಿಸರ್ಬ್ಬಜ್ಞಚೂಡಾಮಣಿಮಲೆರಾ
[3]ಜರಾಜಮಲೆಪರೊಳುಗಂಡಗಂಡಭೇರುಂಡಕದನಪ್ರಚಂಡನಸಹಾಯಶೂರವಿ
[4]ಕಾಂಗವೀರವೈರೀಭಕಂಠೀರವ... ...ಪಾಂಡ್ಯರಾಯಪ್ರತಿ
[5]ಷ್ಟಾಚಾರ್ಯ್ಯಮಗರ... ... ... ...ಳವರಾಯಕೇದಕು
[6]ದ್ದಾಳ... ... ... ... ... ... ...ತ್ರಿಣೇತ್ರಜವನಿಕೆನಾ
[7]... ... ... ... ...ಮರಗಕಾಮಕೋಟಿ...
[8]... ... ... ... ... ...ಶ್ರೀಮತುವೀರಬಲ್ಲಾ
[9]... ... ... ... ... ...ಶಕವರ್ಷ೧೧೩೪ಸಂದ
[10]... ... ... ...ಬಂಟಣರಾಯರಿಪು
[11]... ... ... ... ... ...ಪಾವುಳಗೋಪುಕೆ...
[12]... ... ... ... ... ...ಳವಿದ್ಯಾಧರರಶೂಲಿ.
[13]... ...ರಾಜ... ... ... ... ...ಆನೆಯುಂಹಡೆದು
[14]... ... ... ... ...ಆನೆಯುಕೊಟ್ಟಲಿಗೆ

---

* ಆ ಗ್ರಾಮದ ಜೋಡೀದಾರರಿಂದ ಬಂದದ್ದು.

[15] ..........................ಗಶ್ವಿಆರಿಒಬ್ಬ ರು...
[16] ..........................ಯಕೊಂಪಸಾಪದಲಿಬಿ
[17] ..........................ಸವುಕುರುವಿಕೊಲದ
[18] ..................ತ್ರಿಗೆಪ್ರು......ತ್ರಿಗೆಕೊಪವನುಪುತ್ರಿಯು
[19] ..........................ಂದವನುಯಿಕ್ಷಾ
[20] ಸನವನುಬರೆದ.......
[21] ..............................

## 40

ಅದೇ ಹೋಬಳಿ ಹೂಜಿಗಲ್ ಗ್ರಾಮದ ಉತ್ತರಕ್ಕೆ ಬಸವನಬೆಟ್ಟದ ಕಟ್ಟೆಯ ಕೆಳಗೆ ಗುಂಡಿನಲ್ಲಿ.

[1] .ದನಸಂವತ್ಸರದ...
[2] ಬ.ಲುಚಂದ್ರಸೇನ..ರಿ
[3] ಗಳಗುದ್ದ ವಾಯುಪನ...
[4] ನಿಸಿದ್ಧಿ

## 41

ಮತ್ತೊಂದು ಗುಂಡಿನ ಮೇಲೆ.

[1] ತಾರಣಸಂವತ್ಸರ
[2] ಮಾರ್ಗ್ಗಶಿರಶು.ಲು
[3] ಚಂದ್ರಸೇನಸೂರಿಗಳಗು
[4] ಡ್ಡೆ...ನಿಸಿದ್ಧಿ

## 42

ಅದೇ ಹೋಬಳಿ ಮಾಯಿನಾಯಕನ ಹಳ್ಳಿ ಗ್ರಾಮದ ಈಶ್ವರದೇವಾಲಯದ ಪೂರ್ವಕಡೆ ನಟ್ಟ ಕಲ್ಲು.

[1] ಕೆಂಪವೀರಪ್ಪ
[2] ನಮಸ್ತುಂಗಶಿರಶ್ಚುಂಬಿಚಂದ್ರಚಾಮರಚಾರವೇತ್ರೈ ಲೋ
[3] ಕ್ಯನಗರಾರಂಭಮೂಲಸ್ತಂಭಾಯಶಂಭವೇ। ಸ್ವಸ್ತಿಶ್ರೀವಿಜಯಾಭ್ಯು
[4] ದಯಶಾಲಿವಾಹನಶಕವರುಷಂಗಳು ೧೬೩೪ ನೆಯನಂದನಸಂ
[5] ವತ್ಸರದವೈಶಾಖಬಹುಳ ೫ ಲುಶ್ರೀಮದ್ರಾಜಾಧಿರಾಜರಾ
[6] ಜಪರಮೇಶ್ವರಶ್ರೀರಂಗರಾಜಮಹಾರಾಯರಯ್ಯನವರುಪೆನಗೊಂ
[7] ಡೆಯಲ್ಲುರತ್ನಸಿಂಹಾಸನಾರೂಢರಾಗಿಪೃಥ್ವೀಸಾಂಬ್ರಾಜ್ಯವಂ
[8] ಗೈಉತ್ತಿರಲಾಗಿಕಾಶ್ಯಪಗೋತ್ರದಯಲಹಂಕನಾಡಪ್ರಭುಗಳಾದ
[9] ಮುಂಮ್ಮಡಿಕೆಂಪೇಗೌಡರಯ್ಯನವರಪೌತ್ರರಾದಮುಂಮ್ಮಡಿ
[10] ವೀರಪ್ಪಗೌಡರೈಯ್ಯನವರಪುತ್ರರಾದ ಮುಂಮ್ಮಡಿಕೆಂಪವೀರಪ್ಪ
[11] ಗೌಡರಯ್ಯನವರುತಂಮ್ಮುಆಗ್ರಹಾರದಯಿಪ್ಪತ್ತುನಾಲ್ಕುವೃತ್ತಿಯು

13 ಸ್ಯುಃಪ್ರಜನಂಗಳಿಗೆಬರಸಿಕೊಟ್ಟಭೂದಾನಧರ್ಮಶಾಸನಕ್ರಮವೆಂ

13 ತೆಂದರೆನಮ್ಮಮಾಗಡಿಸೀಮೆಗೆಸಲುವಮಾಯಿನಾಯಕನಹಳ್ಳಿ

14 ಮಾದನಹಳ್ಳಿಹನುಮಾಪುರಕೆಂಪಸಾಗರದಕೆರೆಯಕೆಳಗಣವ

15 ಳಗೆಯಕ್ಷೇತ್ರದಲ್ಲಿಸ ೨೦೦ ಮರಸ್ಥಳಕ್ಷೇತ್ರಸಹ . . ನಾಮಧೇ

16 ಯವಾದಮುಂಮ್ಮಡಿಕೆಂಪವೀರಸಾಗರಅಗ್ರಹಾರದಲ್ಲಿಗಣಸಂ

17 ಖ್ಯೆ . ಯಿಪ್ಪತ್ತನಾಲ್ಕರಲ್ಲಿಶ್ರೀವತ್ಸಗೋತ್ರದಆಪಸ್ತಂಭಸೂತ್ರ

18 ದಅಣ್ಣಾಜೈಯ್ಯಗೆವೃತ್ತಿ ೨ ಭಾರದ್ವಾಜಗೋತ್ರದಆಶ್ವಲಾಯನಸೂ

19 ತ್ರದವೆಲ್ಲಾತಿರುಮಂಣಗೆವೃತ್ತಿ ೧ ಕೌಂಡಿನ್ಯಗೋತ್ರದಆಪಸ್ತಂಭಸೂ

20 ತ್ರದಕೈಪಪಾಪಯ್ಯಗೆವೃತ್ತಿ ೧ ಕೌಂಡಿನ್ಯಗೋತ್ರದಆಪಸ್ತಂಭಸೂತ್ರ

21 ದ . . ನಾಡುವೆಂಕಟಯ್ಯಗೆವೃತ್ತಿ ೧ ಹರಿತಸಗೋತ್ರದಆಪಸ್ತಂಭಸೂ

22 ತ್ರದಶ್ರೀಧರಲಿಂಗಾವಧಾನಿಗೆಕಾಶ್ಯಪಗೋತ್ರದಬೋಧಾಯನಸೂ

23 ತ್ರದಚಂದ್ರಶೇಖರಯ್ಯಗೆವೃತ್ತಿ ೧ ಕಾಶ್ಯಪಗೋತ್ರದವೃತ್ತಿ ೧ ಬೋಧಾಯನಸೂತ್ರ

24 ದಆಬಳನಾರಸಿಂಹಭಟ್ಟರಿಗೆವೃತ್ತಿ ೧ ಶ್ರೀವತ್ಸಗೋತ್ರದಆಪಸ್ತಂಭ

25 ಸೂತ್ರದಕೋನಾಲದಾಸಂಭಟ್ಟರಿಗೆವೃತ್ತಿ ೧ ಕೌಂಡಿನ್ಯಗೋತ್ರದಆಪಸ್ತಂಭಸೂ

26 ತ್ರದಹನ್ಯದವೆಂಕಟಶಾಸ್ತ್ರಿಗೆವೃತ್ತಿ ೧ ಹರಿತಸಗೋತ್ರದಆಪಸ್ತಂಭಸೂ

27 ತ್ರದವಿ...ತೆಯ...ಮಾಪತಿಭಟರಿಗೆವೃತ್ತಿ ೧ ಕಾಶ್ಯಪಗೋತ್ರದಆಪಸ್ತಂಭ

28 ಸೂತ್ರದ...ವೆಂಕಟರಾಯಜ್ಯೋಸ್ಯಗೆ...............

29 ಸ್ತಂಭಸೂತ್ರದ......ನರಹರಿಭಟ್ಟರಿಗೆವೃತ್ತಿ ೧ ಕಾಶ್ಯಪಗೋತ್ರದಬೋ

30 ಧಾಯನಸೂತ್ರದಆನೆಗೊಂಡಿಯಶಂಕರಭಟ್ಟರಿಗೆವೃತ್ತಿ ೧ ಕಾಶ್ಯಪಗೋ

31 ತ್ರದಬೋಧಾಯನಸೂತ್ರದಉಡುವಗೆರೆನಂಜುಂಡಭಟ್ಟರಿಗೆವೃತ್ತಿ ೧

32 ಕೌಂಡಿನ್ಯಗೋತ್ರದಆಪಸ್ತಂಭಸೂತ್ರದಬೋಲುಕುಂಟೆವೆಂಕಟಶಾಸ್ತ್ರಿಗೆ

33 ವೃತ್ತಿ ೧ ಕೌಶಿಕಗೋತ್ರದಆಪಸ್ತಂಭಸೂತ್ರದವೆಲ್ಲಾಡುಅಚ್ಚಭಟ್ಟಗೆ

34 ವೃತಿ ೧ ಭಾರದ್ವಾಜಗೋತ್ರದಆಪಸ್ತಂಭಸೂತ್ರದಸಿರಿಧರೈಯ್ಯ

35 ಗೆವೃತ್ತಿ ೧ ಮೌನಭಾರ್ಗವಗೋತ್ರದಆಶ್ವಲಾಯನಸೂತ್ರದತಿ...ಯನವ

36 ರಿಗೆವೃತ್ತಿ ೧ ವಿಶ್ವಾಮಿತ್ರಗೋತ್ರದಆಶ್ವಲಾಯನಸೂತ್ರದವಿಠಲಭಟ್ಟ

37 ಗೆವೃತ್ತಿ ೧ ಕೌಶಿಕಗೋತ್ರದಆಪಸ್ತಂಭಸೂತ್ರದಉಪಾಧ್ಯಯೋಸೈಯ್ಯ

38 ಗೆವೃತ್ತಿ ೧ ಕೌಂಡಿನ್ಯಗೋತ್ರದಆಪಸ್ತಂಭಸೂತ್ರದ...ರಂಗೈಯ್ಯ

39 ಗೆವೃತ್ತಿ ೧ ಭಾರದ್ವಾಜಗೋತ್ರದಆಶ್ವಲಾಯನಸೂತ್ರದ......

40 ಹನಾರಸಿಂಹಶಾಸ್ತ್ರಿಗೆವೃತ್ತಿ ೧ ಹರಿತಸಗೋತ್ರದಆಶ್ವಲಾಯ

41 ನಸೂತ್ರದತಿಂಮಣ್ಣಭಟ್ಟರಿಗೆವೃತ್ತಿ ೧ ಅಂತುವಿಪ್ಪತ್ತುನಾಲ್ಕುವೃತ್ತಿಯಅಗ್ರಹಾ

42 ರವನುಸೋಮೇಶ್ವರಸ್ವಾಮಿಯುವರಪ್ರತಿಷ್ಟಾಕಾಲದಲ್ಲುಧಾರಾದತ್ತವಾ

43 ಗಿಕೊಟ್ಟವಾದಕಾರಣನೀವುಆಚಂದ್ರಾರ್ಕವಾಗಿಅನುಭವಿಸಿ

44 ಕೊಂಡುಬರುವದುಎಂದುಬರೆಸಿಕೊಟ್ಟಶಿಲಾಶಾಸನ

## 43

ನಾರಸಂದ್ರದ ಹೋಬಳಿ ನಾರಸಂದ್ರ ಗ್ರಾಮಕ್ಕೆ ಪಶ್ಚಿಮಕಡೆ ರಸ್ತೇ ಪಕ್ಕದಲ್ಲಿ.

ಪ್ರಮಾಣ 6' × 5' 3''

[1]ಸ್ವಸ್ತಿ...ಸಮಸ್ತಭುವನಾಶ್ರಯ..............
[2]ಜಾರಾಜಾಧಿರಾಜ............ಶ್ವರಂದ್ವಾರಾವತೀ............
..........................................
[6]...........................ದೇವರಸರುದೋರಸಮುದ್ರದನೆಲುವೀಡಿನೊ...
[7]ಸುಖಸಂಕಥಾವಿನೋದದಿಂಪ್ರಿಥ್ವೀರಾಜ್ಯಂಗೆಯಿಪ್ರುತ್ತಂ..............
[8]..................................ವೀರಗಂಗಶ್ರೀ
..........................................
[19]...........................................ಹಾಶ್ರೀ
[20]ಸ್ವದತ್ತಾಂಪರದತ್ತಾಂವಾಯೋಹರೇತಿವಸುಂಧರಾಸಷ್ಟಿವರ್ಷರುಶಸಹ
[21]ಸ್ರಾಣಿವಿಷ್ಟಾಯಾಂಜಾಯತೇಕ್ರಿಮಿ ಯಿಧರ್ಮಕ್ಕೆಆವನಾರ್ವಬನುಕಂಟ
[22]ಕನಾದರೆಗಂಗೆಯತಡಿಯಲಿಕವಿಲೆಯಕೊಂದಪಾಪದಲಿಹೋಹರು

## 44

ಅದೇ ಗ್ರಾಮದಲ್ಲಿರುವ ನಡಕೇರಿರಾಯ ದೇವಸ್ಥಾನದ ಗರುಡಕಂಭದ ಮೇಲೆ.

[1]ಸ್ವಸ್ತಿಸಮಸ್ತಶ್ರೀಸಖವರುಶ ೧೩೭೭ ಯಮನ್ಮಥಸಂ
[2]ವಛರದಮಾರ್ಗ್ಗಸಿರಬ ೫ ಗುನಿಲೆಯಲಿದೇವರಾ
[3]ಯಮಹಾರಾಯರುಸಖಲಸಾಂಬುರಾಜ್ಯವನಾ
[4]ಳುವಲ್ಲಿಸಂಬುವನಹಳ್ಳಿಯುಹಳ್ಳಕಾಱತಿಪ್ಪೆನಾಯ್ಕ
[5]ರಮಕ್ಕಳುತಿರುಮಲನಾಯ್ಕರುಮಾಡ್ಸಿದಕಂಬ

## 45

ಅದೇ ಹೋಬಳಿ ಕೆಂಪೋಹಳ್ಳಿ ಗ್ರಾಮದ ೬ ನೇ ನಂಬರು ಜಮೀನಿನಲ್ಲಿ.

ಪ್ರಮಾಣ 5' 1'' × 2' 6''

(ಮೇಲ್ಭಾಗದಲ್ಲಿ ೩ ಪಙ್ತಿಗಳು ಹೋಗಿವೆ.)

[1]ಸೋಲೂರಕೆಂಪನಪುರದಗ್ರಾಮ ೧ ದಂಮಿನಕಟ್ಟೆಗ್ರಾಮ ೧
[2]ಉಭಯಂಗ್ರಾಮಯುರಡನೂಕೆಂಚದತಿರುಮಂಗಳನಾತ

9ವೇವರಿಗೆಅವು ್ರತಪದಿನುಮೈವೇದ್ಯಕೆಅಂಗರಂಗವೈಭೋ
10ಗಕೆಬಿಟ್ಟು ಕೊಟ್ಟ ಶಿಲಾಶಾಸನಕ್ರಮವೆಂತೆಂದರೆ
11ಈಎರಡುಗ್ರಾಮಕಂಕಲುವಚತುಸ್ಸೀಮೆವೊಳಗಾ
12ದಸಿದ್ಧಸಾಧ್ಯಸಿಧಿನಿಕ್ಷೇಪಜಲಪಾಷಾಣಬಳಗಾಗಿ
13ವಿನುಳಸರ್ವ್ವಸ್ವಾಮ್ಯವನೂಆಗುಮಾಡಿಕೊಂಡುತಿರು
14ವೆಂಗಳನಾತನ ಸೇವೆನಡಸಿಕೃಷ್ಣ ರಾಯಮಹಾರಾ
15ಯರಿಗೆಪುಣ್ಯವಾಗಬೇಕೆಂದುಬಿಟ್ಟುಕೊಟ್ಟಗ್ರಾಮಕ್ಕೆ
16ಶಿಲಾಶಾಸನ || ದಾನಪಾಲನಯೋರ್ಮಧ್ಯೇದಾ
17ನಾಚ್ಛ್ರೇಯೋನುಪಾಲನಂ ।ದಾನಾತ್ಸ್ವರ್ಗಮವಾಪ್ನೋತಿಪಾಲನಾದ
18ಚ್ಯುತಂಪದಂ । ಸ್ವದತ್ತಂದ್ವಿಗುಣಂಪುಣ್ಯಂಪರದತ್ತಾನು
19ಪಾಲನಂ । ಪರದತ್ತಾಪಹಾರೇಣಸ್ವದತ್ತಂನಿಷ್ಫಲಂಭವೇ
20ತ್ । ಸ್ವದತ್ತಂಪರದತ್ತಂವಾಯೋಹರೇತಿವಸುಂಧರಾಷಷ್ಟಿ
21ರ್ವರುಷಸಹಸ್ರಾಣಿವಿಷ್ಟಾಯಾಂಜಾಯತೇಕ್ರಿಮಿ ||... ...
22ಧರ್ಮ್ಮಕ್ಕೆಅರುಅಳಪಿದರುಗಂಗೆಯತಡಿಯಲಿಕವಿಲೆಯ
23... ... ... ... ... ... ... ... ...

## 46

ಅದೇ ಹೋಬಳಿ ಮಾದಗೊಂಡಹಳ್ಳಿಗೆ ಸೇರಿದ ಕಳ್ಳಿಪಾಳ್ಯದ ಊರಮುಂದಿನ ಆಲದಮರದ ಕೆಳಗೆ ಬಿದ್ದಿರುವ ಕಲ್ಲು.

ಪ್ರಮಾಣ 6' × 2'

1ಜಯಸಂವಚರದಪಾ
2ಲ್ಗುಣಬಹುಳ ೪ ಆ
3ಉತುರುಚೆಂನಮನಾ
4ಯಕರಮಗಬೀರಪನಾ
5ಯ್ಕರಯುಗವ್ರು ಡೆಂಗೆ
6... ... ವಂಟುಂಬಳ
7... ವಾನ್ಯಆಳಪಿ
... ... ... ...

## 47

ಅದೇ ಗ್ರಾಮದ ಬಳಿ ಗುಡ್ಡನ ಹೊಲದಲ್ಲಿ.

ಪ್ರಮಾಣ 5' 6' × 3' 6''

1ಸ್ವಸ್ತಿ ... ಪ್ರಸಸ್ತಿ... ... ಶ್ರೀಮನ್ಮ
2ಹಾಮಣ್ಡಳೇಶ್ವರತಳಕಾಡು... ...
3ಗೊಣ್ಡಗಣ್ಡ . ಗಂಗ... ... ..
4ಳಂ . ಯ . ಪವರಂಸುಟ್ಟುಲೋಕೆ... ...
5. ಮಣ್ಡಳಗ್ಗೆಭೀಮ... ... ...
6ಯಾಳ್ದಪೆಮ್ಮೆಯತೋಱುಗುಂ...
7ವಂ ... ವಿಯ
(ಮುಂದೆ ಹೋಗಿದೆ)

## 48

ಅದೇ ಹೋಬಳಿ ಮರೂರು ಗ್ರಾಮದ ಜನರನ ಮನೇ ಪಕ್ಕದಲ್ಲಿ ಬಿದ್ದಿರುವ ಕಲ್ಲು.

ನಾಗರಾಕ್ಷರ.

ಪ್ರಮಾಣ 3' 2'' × 2' 3''

[1]ಶುಭಮಸ್ತು ಸ್ವಸ್ತಿಶ್ರೀವಿಜಯಾಭ್ಯುದಯಶಾಲೀವಾಹನಶಕವರ್ಷ ೧೪೬೧ .
[2]ವಿಕಾರಿಸಂವತ್ಸರದವೈಶಾಖಬ ೨ ಯುಮಕರಸಂಕ್ರಾಂತಿಪುಣ್ಯಕಾ
[3]...ತುಂಗಭದ್ರಾತೀರದಲ್ಲಿಶ್ರೀವಿರೂಪಾಕ್ಷಲಿಂಗನಸಂನಿಧಿಯು
[4]........ರಾಜಪರಮೇಶ್ವರಶ್ರೀವೀರಪ್ರತಾಪಅಚ್ಯುತದೇವ
[5]...ಮಹಾರಾಯರುಮರವೂರಪೂರ್ವಶಾಸನವಿರಲಾಗಿವಾ
[6]..............ಶ್ರೀನರಸಂಣನಾಯಕರಿಗೆಧರ್ಮವಾಗಬೇ
[7]..............ರದುಜೀರ್ನೋದ್ಧಾರವಾಗಿನಿಧಿನಿಕ್ಷೇಪಜಲಪಾ
[8]..............ಅಕ್ಷೀಣೀಆಗಾಮಿಸಿದ್ಧಸಾಧ್ಯಂಗಳೆಂಬ
[9]......ಅಷ್ಟಭೋಗತೇಜಸ್ವಾಮ್ಯದಿಂಆಚಂದ್ರಾರ್ಕಸ್ಥಾಯಿ
[10]...ಸುಖದಿಂಅನುಭವಿಸೀಎಂದುಅಚ್ಯುತದೇವಮಹಾ
[11]......ರುಜೀರ್ಣೋದ್ಧಾರವಮಾಡಿಪಾಲಿ[ಸಿ]ದರುಸ್ವದತ್ತಾದ್ವಿಗು
[12]ಣಂಪುಣ್ಯಂಪರದತ್ತಾನುಪಾಲನಂಪರದತ್ತಾಪಹಾರೇಣ
[13]ಸ್ವದತ್ತಂನಿಷ್ಫಲಂಭವೇತ್ । ಸ್ವದತ್ತಾಂಪರದತ್ತಾಂ
[14]ವಾಯೋಹರೇತಿವಸುಂಧರಾಃ । ಷಷ್ಟಿವರ್ಷಸಹಸ್ರಾಣಿವಿಷ್ಟಾ
[15]ಯಾಂಜಾಯತೇಕ್ರಿಮಿಃ । ಏಕೈವಭಗಿನೀಲೋಕೇಸರ್ವೇಷಾಮೇ
[16]ವಭೂಭುಜಾಂ । ನಭೋಜ್ಯಾನಕರಗ್ರಾಹ್ಯಾವಿಪ್ರ
[17]ದತ್ತಾವಸುಂಧರಾಃ
[18]ಶ್ರೀ

## 49

ಕುದೂರು ಹೋಬಳಿ ಶ್ರೀಗಿರಿ ಪುರದ ಗ್ರಾಮದ ಆಂಜನೇಯ ದೇವಸ್ಥಾನದ ಮುಂದಿನ ಕಲ್ಲು.

ಪ್ರಮಾಣ 6' × 3' 3''

[1]ಸ್ವಸ್ತಿಶ್ರೀಶಕವರು
[2]ಷ ೧೪೫೨ ನೆಯಸಾಧಾರಣಸಂವ
[3]ತ್ಸರದಆಷಾಢಶು ೧ ಸೋಮವಾರದಲು
[4]ಸ್ವಸ್ತಿಸಮಸ್ತಪ್ರಶಸ್ತಿಸಹಿತಂನಂದಿನಾಥಭ್ರು
[5]ಂಗಿನಾಥವೀರಭದ್ರದೇವರುಮುಖ್ಯ
[6]ವಾದಅಭಿನವಕಯಿಲಾಸದಕ್ಷಿಣ
[7]ವಾರಣಾಸಿಎನಿಸಿದವೃಷ್ಟಿಗೆಮೂಲಸ್ಥಾ
[8]ನವೆನಿ[ಸಿ]ದಶ್ರೀಸಿವಗಂಗಿನಾಥದೇವರುಮು
[9]ಖ್ಯವಾದಮುಹಾಮುಹಂತುಒಳಗಾದಸುತ್ತೀ
[10]ಶ್ವರರಾಯಶ್ರೀಸಿರಿಗಿರಿದೇವಒಡೆಯರುತಂಮ
[11]ಕಾರುಣ್ಯಸಿಸುಮಯನಪ್ಪನವರಮಕ್ಕಳು
[12]ಕಳ್ಳಪ್ಪನವರತಂಮವೀರಪ್ಪನವರಿಗೆತಂ
[13]ಮಣನುಸಾಂವ್ಯದಿಂದಲೂಶ್ರೀಗಿರಿಸಮು
[14]ದ್ರದಪುರವನುಕಟ್ಟಿಹೇಳನಿರೂಪವನಿತ್ತಲ್ಲಾಗಿ

15 ಆವೀರಪ್ಪನವರು ಹೊಸತಾಗಿ ಮಾಡಿದಶ್ರೀಗಿ
16 ರಿಕಮುದ್ರದಗ್ರಾಮ ೧ ಕಂಬುಳ್ಳಚತುರುಸೀ
17 ಮೆಒಳಗಾದಗದ್ದೆಬೆದ್ದಲುವೊಳವಾರುಮೇಲುಒ
18 . . ಅಪೂರ್ಬಯಸಹ . . ವರುಷ ೧ ಕಂರಾ
19 ಜೀರ್ದ್ಧಕಿವಮಾಡಿದಕಟ್ಟು . . ಯುವಗ ೫೦ ಯುಆಯಿ
20 ವತುಕೊಂನನುಆವೇವರಿಗೆಕೊಂಡುಗ್ರಾಮದತ
21 ಪ್ಪತಉಡಿದಂಡಉಂಡಿಗಹದರಮಿಕ್ಕಪಿಕ್ಷಸು
22 ಂಕಅನುಭುಮದುವೆದೆಆಮುಂತಾಗಿಸರ್ವಮಾ
23 ಂನ್ಯಆಯ್ವಿತುಹೊಂನಿಂದಮೇಲಬಂದುತಾರ
24 ಲಿಕ್ಕೆಅವನೊಬ್ಬನುಅಳುಪಿದವನುಸಾನನ
25 ಮಾಂಸಕೆಅಳುಪಿದವನುಗಂಗೆತಡೆಯಲಿಕವಿಲಿ
26 ಯಕೊಂದಪಾಪದಲಿಹೋಹರುದೇವಲೋಕಮರ್ತ್ಯಲೋಕಕೆಹೊ
27 ಅಗು

## 50

ಆದೇ ಕಲ್ಲಿನ ಹಿಂಭಾಗ.

(ಮೇಲ್ಭಾಗದಲ್ಲಿ ೨ ಪಜ್ತಿಗಳು ಹೋಗಿವೆ.)

3 ಶುಭಮಸ್ತು
4 ...ಶಾರ್ವರಿಸಂವತ್ಸರದಭಾದ್ರಪದಬ ೫ ಲುಶ್ರೀ
5 ...... ...ದೇವಮಹಾರಾಯರುಪೃಥ್ತ್ವೀರಾಜ್ಯಂಗೈಉ
6 ... ...ಲುಚಂಗಿಬಸವೇನಾಯ್ಕರಿಗೆಧರ್ಮ್ಮವಾಗಬೇಕಾಯೆಂ
7 ದುಸು ... ...ಸರು ...ಸೀಮೆಯುಲು...ಸಲುವಸಿರಿಗಿರಿಪು
8 ರದಸ್ತಳದಬ ...ಂಹಳ್ಳಿಯ ... ...ವನುಸರ್ವಮಾನ್ಯವಾಗಿ
9 ಬಿಟ್ಟತ್ತುಮಂಡ... ...ದಕ್ಕೆಅಳುಪಿದರೆತಂನಮಹಿಮಾ
10 ನಿಕೆಯುಹೆಆರಿಗೆ ... ...ತರು ... ...ತಂಮತಾಯ
11 ವಾರಾಣಸಿಯಲಿಕೊಂದಪಾಪಕೆಹೋಹರು
12 ಯಿಧರ್ಮವನೆಡಸುವನುಬಾಮಣ
13 ಗೆಉದ್ಯಾಮಕೊಡಿಸಿದಧರ್ಮ್ಮ

## 51

ಆದೇ ಗ್ರಾಮಕ್ಕೆ ವಾಯುವ್ಯದಲ್ಲಿ ಬಂಡೇಮೇಲೆ.

(ಆರಂಭದಲ್ಲಿ ೩ ಪಜ್ತಿಗಳು ಗ್ರಂಥ ಮತ್ತು ಆರವಕ್ಷರದಲ್ಲಿ ಇವೆ.)

1 ಸ್ವಸ್ತಿಶ್ರೀಸಮಸ್ತಪ್ರಸಸ್ತಿಶ
2 ಏತಂಸಿವಗಂಗೆಯಶ್ರೀ
3 ಮಹ . ಸಿವಸಹಿತ
4 ಮಂಡಲು

(ಮುಂದೆ ಬರವಣಿಗೆ ಇಲ್ಲ.)

## 52

ಆದೇ ಹೋಬಳಿ ಬಿಸ್ಕೂರ ಗ್ರಾಮದ ಊರುಬಾಗಲ ಮಾಳಿಗೆಗೆ ಹಾಕಿರುವ ಕಲ್ಲಿನ ಮೇಲೆ.

ಪ್ರಮಾಣ 5' 0 × 1' 9"

1 ಶುಭಮಸ್ತು || ಸ್ವಸ್ತಿಶ್ರೀವಿಜ
2 ಯಾಭ್ಯುದಯಶಾಲಿವಾಹನಶ
3 ಕವರುಷ ೧೪೪೬ ನೆಯುರಕ್ತಾ
4 ಕ್ಷಿಸಂವತ್ಸರದಚಯಿತ್ರಶು

[5]ದ್ಧ ೧೧ ಲುಬಿಸಗೂರಕರಿಯು
[6]ಚೆಂನಪ್ಪಗಳುಡರಮಕ್ಕಳು
[7]ಗೋವಿಂದಗಳು[ಡ]ನುಮಾಡಿಸಿದ
[8]ಬಿಸಗೂರಪನು ವಣಕಲ್ಲಕೆ
[9]ಜ್ಬಾಗಿಲು । ಶುಭಮಸ್ತುಹಲನಿಶ್ರೀ
[10]ಯ್ಯುಗೈದನು

## 53

ಅದೇ ಗ್ರಾಮಕ್ಕೆ ಪಶ್ಚಿಮ ವೋಹರ್ವಿಸಾಬೀ ಹೊಲದಲ್ಲಿ ಪಾಳುಬಿದ್ದಿರುವ ಈಶ್ವರ ದೇವಾಲಯದ ಪೂರ್ವ ಕಡೆ ಗೋಪೇ ಕಲ್ಲಿನ ಮೇಲೆ.

ಪ್ರಮಾಣ 4' 3" × 7'

ಶ್ರೀಮೊಳಳೇನ್ಪ್ರನಾಮದೇಹಶ್ರೀಮಾನೂವ್ರರಕ
ರಗಸ್ವಾನ್ವಯಕಖುಳಕೃತಂಶಿವಾಲಯಮ್

## 54

ಅದೇ ಗ್ರಾಮದ ಊರಬಾಗಿಲ ಮಂಟಪದ ಪೂರ್ವಕಂಭದಲ್ಲಿ.

[1]ವಿರೋಧಿಸಂವತ್ಸರದ
[2]ಭಾದ್ರಪದಶು ೧೫ ಲು
[3]. ಷ್ಣರಾಯ ಮಹಾರಾ
[4]ಯರಕಾಲದಲಿಎಲ
[5]........ಯ್ಯನವರ
[6]ಪು . ಶ್ರೀ . ಉಡ
[7]ಪನಾಯಕರು ಮಾಡಿ
[8]ಸಿದಕಲ್ಲುಬಾಗಿಲು

## 55

ಅದೇ ಹೋಬಳಿ ಬಿಸಗೂರು ಗ್ರಾಮದ ವೀರಪ್ಪಗೌಡನ ಹುಲ್ಲು ಕಾವಲು ಜಮೀನಿನಲ್ಲಿ.

ಪ್ರಮಾಣ 6' × 2' 6"

[1]ಸ್ವಸ್ತಿಭುವನಾಶ್ರಯಶ್ರೀಪ್ರಿಥ್ವೀವಲ್ಲಭಮಹಾ
[2]ರಾಜಾಧಿರಾಜರಾಜಪರಮೇಶ್ವರಪರಮಭಟ್ಟಾರಕ
[3]ಯಾದವಕುಲಾಂಬರದ್ಯುಮಣಿಸರ್ವ್ವಜ್ಞಚೂಡಾಮ
[4]ಣಿಮಲೆರಾಜರಾಜಮಲೆಪರೊಳುಗಂಡಕದನಪ್ರಚಂ
[5]ಡಗಂಡಭೇರುಂಡಏಕಾಂಗವೀರಅಸಹಾಯಶೂ
[6]ರಶನಿವಾರಸಿದ್ಧಿಗಿರಿದುಗ್ಗ್ರಮಲ್ಲಚಲದಂಕರಾಮ
[7]ವೈರೀಭಕಂಠೀರವಮಗರರಾಜ್ಯನಿರ್ಮೂಲಚೋ
[8]ಳರಾಜ್ಯಸ್ಥಾಪನಾಚಾರ್ಯ್ಯಪಾಂಡ್ಯಕುಲಸಮುದ್ಧರಣ
[9].... ನಿಸ್ಸಂಕಪ್ರತಾಪಚಕ್ರವರ್ತಿಶ್ರೀವೀರಬಲ್ಲಾ
[10]ಳದೇವರಸರುಪ್ರಿಥ್ವೀರಾಜ್ಯಂಗೆಯುತ್ತಿರ್ದ್ದಲ್ಲಿ...
[11]... ಹಾವಾಸ...ದುಭವವಿಶ್ವಕರ್ಮ್ಮನಿರ...
[12]ತ್ರಿಭುವನಭವನವಿಮಾನವಿನಯ........
[13]ವಿಸ್ತೀರ್ಣ್ನಪೂರಿತಾರ್ಣ್ನವ.........
[14]ಬರದಗುರುಬಸವಾರಾಧ್ಯ . ಮುಖ್ಯವೀರಪಂಚಾ
[15]...ಸಕವರುಷ ೧೧೨೬ ಪರಾಭವಸಂವತ್ಸ
[16]ರದಆಶ್ವಯಿಜಸು ೩ ಆದಲು.........
[17]ಸನಕ್ರಮವೆಂತೆಂದಡೆ.....
[18]ಗಣಸಬ್ಬರ್ವಮಾನ್ಯಸ್ಥಳಂಗಳ...
[19]ರಕ್ಷಕರ್ತ್ತದಲುನಾಯಕವಾಡಿ...
[20].. ಗಳೊಳಗಾದವರಿಗೆ ....
[21]ಳಂಗಳುಸಿವಪುರಮುಕವಃಸೆ...
[22]ಡುಗಳ . ಡಗಿಕಂಮಾಟಿ...
[23]ದವೀರಪಂಚಾಳ...
[24]ಡೆತಂಮಡಿಮಾನ್ಯ .... ಮದುವೆ ....
[25]. ಮಕ್ಕಳ ...........
[26]ಇದುಯಿಮವರಿಗೆ..............

27ರುನಾ . ಕ . . . . . . . ದೇಶಂ . . . . . ದಿಯು . . .
28ನಡೆಸು . . . . . . . .
29ರಲಸು . . . . . . . . . . .
30ರುಆಚಾರ್ಯ್ಯರು . . . . . . . . . ಷ್ಟೆ . .
31. ರುಪಂಚಕರುಕ . . . . . . . . . . . ದಮುದ್ರೆ . .
32 . ಪಡಿಸಣಪುರಿಯಾದೆ . . . . . . ಕೆಕೊಂಡು . .
33ಣವನಂಎತ್ತ್ತವಸಂ . . . . . ೧|ನಾ . .
34ಮವರ.ಶಂಪ್ರತಿತ್ತೆಬಿವರುಅನ್ಯಾಯು . . ದಂಡ .
35ಉದೂವಿಲಿಂದುಕೊಟ್ಟತಾಂಬ್ರಶಾಸನ . . ಕಂಜು
36ಗಾಬಿ . . ದಿಯಲಿಕಾರುಂಣ್ಯಾಂವಾಡಿಅಗು
37ರುಗಳಕಯ್ಯಲಿಧಾರೆಯನಿಟಿದುಆಷಂ
38ಚಾಳರುಮಾಡುವಧರ್ಮ್ಮಕ್ಕೆಬಿಟಿಉಯಿಂವು
39ರಿಯಾದೆಸುಖದಿಬಾಳುವಂತಾಗಕೊಟ್ಟಸಾ
40ಸನಾಯಿಾಧರ್ಮ್ಮಕ್ಕೆಆರುಆರುಅಳುಹಿದರುಗಂಗೆ
41ಯು[ . . . . . . ]ಕವಿಲೆಯುಕೊಂದಪಾಪ . . . .
42ರು

## 56

ಹುಲಿಕಲ್ಲು ಹೋಬಳಿ ಬೀಸನಹಳ್ಳಿ ಗ್ರಾಮದ ನೃಸಿಂಹ ದೇವಾಲಯದ ದಕ್ಷಿಣಕ್ಕೆ ನಟ್ಟ ಕಲ್ಲು.

1ಶುಭಮಸ್ತುಸ್ವಸ್ತಿಆಂಗೀರಸಸಂವತ್ಸರ .
2ಮಿತ್ರಶು ೧೦ . . . . .
3ಮಹಾರಾಜಾಧಿರಾಜ . . . .
4. . . . . . . . .ರಾಮರಾ
5ಜಯ್ಯ. . . . .ಸಿಂಹದೇ
6ವರಿಗೆ. . . . . .

## 57

ತಿಪ್ಪಸಂದ್ರದ ಹೋಬಳಿ ತಿಪ್ಪಸಂದ್ರದ ಕೆರೇ ದಕ್ಷಿಣ ಕೋಡಿಯ ಬಳಿ.

ಪ್ರಮಾಣ 2' × 1' 3"

1ಶುಭಮಸ್ತು
2ಶುಕ್ಲಸಂವತ್ಸರದಮಾ
3ಘಶು ೧೫ ಲುಪಂಚಾ
4ಗ್ನಿದೀಕ್ಷಿತರೂಕೋಡಿಯ
5ನೂತೆಬಿಪಾಗಿತೆಗಿಸಿಪ್ರೊ
6ಡವನೂಕಟ್ಟಿಸ್ತರಾಗಿ
7ಪಂಚಾಗ್ನಿದೀಕ್ಷಿತರ
8ಜೀರ್ಣೋದ್ಧಾರಶ್ರೀ

## 58

ಅದೇ ಹೋಬಳಿ ಜೋಡಿ ಹೆಬ್ಬಳಲು ಗ್ರಾಮಕ್ಕೆ ಉತ್ತರ ಸಣ್ಣೇನಹಳ್ಳಿ ಗುಡಿ ಬಳಿ.

ಪ್ರಮಾಣ 3' 6" × 2' 6"

1ಸ್ವಸ್ತಿಶ್ರೀಹೊಯಸಣ
2ಪ್ರತಾಪಚಕ್ರವರ್ತ್ತಿಶ್ರೀವೀ
3ರಬಲ್ಲಾಳದೇವರಸರು
4ಪೃಥ್ವೀರಾಜ್ಯಂಗೆಯ್ಯುತ್ತಿರೆ
5ಶಕವರುಶ ೧೨೩೭ ನೆಯ । ರಾಕ್ಷಸಸಂ
6ವತ್ಸ । ಕಾರ್ತ್ತಿಕಸು ೫ ಸೋಮಂದಂದು । ಶ್ರೀಮ
7ನು ಮಹಾಪ್ರಧಾನ. . . ನಾಥದೇ
8ವಪ್ಪದಂಣ್ನಾಯ್ಕರೂ | ಪೊಂನ್ನಂಣ್ನನ
9ಕಾಮಯ್ಯದಂಣ್ನಾಯ್ಕರೂ | ಹುಳಿಯ
10ನಹಳ್ಳಿಯನಾಡ. . . ದೇವನೊಳಗಾ
11ದಸಮಸ್ತಪ್ರಜೆಗಾಡುಗಳೂ । ಹುಳಿಯ
12ನಹಳ್ಳಿಯನಾಡೊಳಗಣ । . . . . . .

13ಳುದೇವರತೊತ್ತಿನ...ನು...ಹಿ
14ಯುಸೌವರೆಣಿಯುಸೇನಬೋವರಾ
15ಜಂಣಂಗೆಇದ...ಚಂದ್ರನುಳ್ಳನ
16ರಂ ! ಕೊಡಗೆಯಾಗಿ
17... ... ... ...

## 59

### ಆದೇ ಹೋಬಳಿ ಹುಲ್ಲೇನಹಳ್ಳಿ ಗ್ರಾಮದ ಬಸವಂಣನ ದೇವಸ್ಥಾನದ ಮುಂದೆ.

ಪ್ರಮಾಣ 4′ × 2′ 9″

1ಸ್ವಸ್ತಿಶ್ರೀಜಯಾಭ್ಯುದಯಶ್ಚಕವರುಷ ೧೩೪೦ ನೆಯ
2ಪಿಂಗಳಸಂವತ್ಸರದಭಾದ್ರಪದಬ ೫ ಆದಂದುಸ್ವಸ್ತಿಶ್ರೀಮತು
3ಪ್ರತಾಪಚಕ್ರವರ್ತ್ತಿಹೊಸಳಭುಜಬಲಶ್ರೀವೀರಬಲ್ಲಾ
4ಳದೇವರುಪ್ರಿಥ್ವೀರಾಜ್ಯಂಗೈವಲಿಆದೇವರುರಾಯ
5ದಂಡನಾಥಪ್ರೋಲಗದಕಂಭ . ಳಾಳುವದಂಣ
6ಯುಕರವುಕಳುಗೆಂಗೆಯುದಂಣಯುಕರಅಧಿ
7ಕಾರಿ... ... ...ನವರುಹುಳನಹಳ್ಳ
8ಕೊಲಕಾ... ... ...ದುದನುಉಂ...
9ಆಊರಮುಡ್ಡುವ... ... ... ...ಡಗಿ
10ಕೊಡಿಸಿ... ... ...ಆಊರ
11... ... ...ಉಡಿತೊಡಿನವಂ
12ಕಳ... ... ...ನೆರವದಂಡವ
13...ವರುಗಉಡ... ... ... ...ವರಹ
14೫೦ಂ ಸಲುವ್ರದುಪಟ್ಟಣ... ...ದಲುಕಂಬಾ
15೭೫ಂ ಸಲುವ್ರದುಯಿ......ಬ್ರಹ್ಮಪು
16ರಗ್ರಾಮ...ಕಲೂ... ...ದಲುಕಂಬ ೧೫ಂ
17ಸಲುವ್ರದು... ... ...ಕಲುಬಹ......
18...ಷನುಂ...ಆಕು ೧೧ ಗ . ಬ
19......ಉತ್ತವರಗ... ...
20... ... ......ಸಲುಉಡೆಂ
21ದುಕೊಟ್ಟಸಿಲಾಶಾಶನಯಿದನಳವಆರಸುಅಧಿಕಾರಿನಾ
22ಯುಕವಾಡಿನಾಡಗಉಡಗಳುಯಿಾಸಸನವುರಿಯಾ .
23ಆರುಅಳಪಿಅನ್ಯಾಯುವವಾಡಿದವರುಗಂಗೆಯು
24ತಡಿಂ......ಕವಿಲೆ......ಗಳನ
25ಕೈಯಾರಕೊಂದಪಾಪಕೆಹೋಹರುಮಂಗಳಮಹಶ್ರೀಶ್ರೀ

## 60

### ಆದೇ ಹೋಬಳಿ ಮಲ್ಲಸಂದ್ರದ ಗ್ರಾಮದ ಕಟ್ಟೇ ಮೇಲೆ.

ಪ್ರಮಾಣ 8′ × 2′ 9″

1ಶುಭಮಸ್ತುಸ್ವಸ್ತಿಶ್ರೀಜಯಾದ್ಭುದಯುಶಾ
2ಲಿವಾಹನಶಕ... ...೧೪೬೨ ಶಾರ್ವರಿ
3ಸಂವತ್ಸರದ......
4ಶ್ರೀಮನ್ಮಹಾರಾಜಾಧಿರಾಜರಾಜಪರಮೇಶ್ವರ
5ಶ್ರೀವೀರಪ್ರತಾಪಶ್ರೀವೀರಅಚ್ಯುತದೇವ
6ಥಾಯುಮಹಾರಾಯರೂಸುಖದಿಂಪ್ರಥ್ವಿ
7ರಾಜ್ಯಂಗಯಿಉತ್ತಾಂ
8... ...ಚವರದತಿಂವು
... ... ... ...
13ಡೆಯರಿಗೆಪುಂಣ್ಯವಾಗಬೇಕೆಂದುಷು
14...ತಿರುವೆಂಗಳನಾಥದೇವರಿಗೆಅವು
15ತಪಡಿಗೆಧಾರೆಯುನೆರುದುಕೊ

[16]......... ......

[17]ಮುಡಿದಗ್ರಾಮಉತಿರುವೆಂಗಳನಾಥದೇವರಿಗೆಅ

[18]ಮಾ ತಪಡಿಗೆಆಚಂದ್ರಾರ್ಕಸ್ಥಾಯಿಯಾಗಿಸಲುವ್ರು

[19]ದೂಎಂದು.........

(ಮುಂದೆ ಕಾಣುವದಿಲ್ಲ)

## 61

ಅದೇ ಹೋಬಳಿ ದೊಡ್ಡ ಮುದಗೆರೆ ಗ್ರಾಮದ ರಂಗನಾಥ ದೇವಾಲಯದ ದಕ್ಷಿಣ ಕಡೆ ಬಾಗಿಲ ಮುಂದೆ ಮಂಟಪಕ್ಕೆ ಹಾಕಿರುವ ಕಲ್ಲಿನಲ್ಲಿ.

[1]ಹಾಡುವಸಿವನಾಯಮುದಗೆ

[2]ರೆಯತಿರುವೆಂಗಳನಾತನಭೃತ್ಯನು

## 62

ಸೋಲೂರು ಹೋಬಳಿ ಸೋಲೂರಲ್ಲಿ ನನ್ನೂಸಾಬಿ ತೋಟದಲ್ಲಿ.

ಪ್ರಮಾಣ 4' × 2' 3"

[1]ಶಾಲಿವಾಹನಸಕವರ್ಷ ೧೪೩೦

[2]............ಹೇವಿಳಂಬಿಸಂವತ್ಸರದ

[3]ಮಾರ್ಗಸಿರಶುಧ೧ಲುಶ್ರೀಮನ್ಮಹಾರಾಜಾ

[4]ಧಿರಾಜಪರಮೇಶ್ವರಶ್ರೀವೀರ...ದಶ್ರೀವೀ

[5]ರಪ್ರತಾಪಅಚ್ಯುತದೇವಮಹಾರಾಯರು

[6]ಭುಜಬಳಪ್ರತಾಪರಾದಚತರದ......

[7]ಚಾಪೆಯನಾಯಕಅಯನವರಕಾರ್ಯಕ್ಕೆಕರ್ತ

[8]ರಾದತಿಂಮಪನಾಯಕರಯನವರುಸೋಲುರ...

[9]ಲಿಙರೆಯರದುಸೀಮೆಯಮದುವೆಯಸುಂಕ

[10]ವನುಬಿಟ್ಟಸಮಯಧರ್ಮಕೆಲವನಾನೊಬನು

[11]ಆಳುಹಿ[ದ]ಡೆತಂಮತಾಯಿತಂದೆಯ

[12]ಬ್ರಾಹ್ಮಣಗೋವನುವಾರಣಾಸಿಯಲ್ಲಿಕೊಂ

[13]ದಪಾಪಕೆಹೋಕರು

## 63

ಅದೇ ತೋಟದಲ್ಲಿ ೨ ನೇ ಕಲ್ಲು.

[1]ಸಾಲಿವಾಹನಸಕವರುಶ

[2]೧೪೭೮ ವರಸನಳಸಂವತ್ಸರ

[3]ದಆಷಾಡಬ ೩ಲು.........

[4]ವಿದ್ಯಾನಗರದಲಿರಾಮರಾ

[5]ಪಯ್ಯನೆ.ಅದಿಂಮರಾಜಯ್ಯನವರ

[6]...............ರಕೆಮಾಡಿದ

[7]ತೆರೆಬಗ ೧೭ ವರಹಯಿದಟೊಳಗೆ

[8]೧೫ ವರಹದಭಂಗಾರಯಿ...ಬಳುಗ೩

[9]ಯುಗ೮........................

...............................

[12]ದವಯಿ............

[13].........ಕೊಂಡವತನ್ನ ವಂಶಕ್ಕೆ

[14]ಪೊತ್ತೆಯಹಿಡಿದಸಮಾನಯಿಂತೀಕಾರ್ಯ

[15]......... ............

## 64

ಅದೇ ಗ್ರಾಮದಲ್ಲಿ ಚಲುಮೇ ಮತದ ಹಿತ್ತಲಲ್ಲಿ ಬಿದ್ದಿರುವದು.

ಗ್ರಂಥ ಮತ್ತು ಅರವಕ್ಷರ

## 65

ಅದೇ ಮಠದ ಹೊಲದಲ್ಲಿರುವ ಗುಂಡಿನ ಮೇಲೆ.

[1]ತಿಂಮರಸೈಯ [2]ತಿಂಮರಸೈಯ [3]ಪುಟತಿರುಮಲಯನು [4]ಸೋಣನಿಗೆಕೊಟಕೊಲ

## 66

ಅದೇ ಗ್ರಾಮಕ್ಕೆ ಪಶ್ಚಿಮ ಸರ್ವೇ ನಂಬರು ೧೭೦ ನೇ ಜಮೀನಿನಲ್ಲಿ.

[1]............
[2]ಸಲಿವಹನಸಕವರುಷದಂ
[3]...ಸಿಧಾರ್ತಿಸಂವತ್ಸರದ
[4]ಚೈತ್ರಸುಧಏಯಲು
[5]ಶ್ರೀಮತುರಾಮಪ್ಪರಾಉ
[6]ತ್ತಿರುನೀಲಗಿರಿಯತಿರು
[7]ಮಂಗಳನತದೇವರಿ
[8]ಗೆಕೊಟಸಸನಪುರಹು
[9]ವಿನತ್ರೋಟ್ಟಪುರಗಿರಿಹ
[10]ರಿಯಕೆಚೆಯಹಿಂದೆ
[11]ಸಲುವಗದೆನಾನಡಿಸಿ
[12]ಹಲರು......
[13]ಲರುಕಟಿಸದಂತದೇವ
[14]ಸ್ತನ।ಯಿದಕೆಮುಲಿಗಸುಜ
[15]...ಗೆಯಂಕರಾಸುಬೇಳಾ
[16]ರದಮುತ್ತಿಗೆಂಕರಾಸು

## 67

ಅದೇ ಹೋಬಳಿ ಮೊಂಭತ್ತನ ಕುಂಟೇ ಗ್ರಾಮಕ್ಕೆ ನೈರುತ್ಯ ಹಳೇಗ್ರಾಮದ ನಿವೇಶನದಲ್ಲಿ.

ಪ್ರಮಾಣ 5' × 1' 6"

[1]ಸ್ವಸ್ತಿಶ್ರೀವಿಜಯಾಭ್ಯುದಯ
[2]ಸಾಲಿವಾಹನಸಕವರುಷ
[3]೧ಗಳು೧೦೦೪೭..ನೇಆನಂ
[4]ದಸಂವತ್ಸರದಆಷಡಮೊದಲ
[5]ಯೇಕಾದಶೀಪುಂಣ್ಯಕಾಲದಲಿ
[6]ಶ್ರೀಮಂಮಹಾರಾಜಾಧಿರಾಜಪ
[7]ರಮೇಶ್ವರಶ್ರೀವೀರಪ್ರತಾಪಸದಾ
[8]ಶಿವರಯರುಪೃಥ್ವೀರಾಜ್ಯಂ
[9]ಗೆಯುತಿರಲುರಾಮರಾಜಶ್ರೀ
[10]ರಂಗದೇವಮಹಾಅರಸುಗಳಕಾ
[11]ರ್ಯಕ್ಕೆಕರ್ತ್ತರಾದಶಂಕರಯನವ
[12]ರುಸೋಲೂರನೀಲಗಿರಿತಿರುವೆಂ
[13]ಗಳನಾತನಪೀಜಾರಾಧನೆಆಮ್ರುತ
[14]ಪಡಿಗೆಕೊಟ್ಟಧರ್ಮಸಾಧನ
[15]ಶ್ರೀರಂಗರಾಜಯಂ

## 68

ಅದೇ ಹೋಬಳಿ ಆರಿಶಿನಕುಂಟೇ ಗ್ರಾಮದ ಆಂಜನೇಯ ದೇವಸ್ಥಾನದ ಬಳಿ.

ಪ್ರಮಾಣ 4' 6" × 1' 10"

(ಮುಂಭಾಗ.)

[1]ಸ್ವಸ್ತಿಶ್ರೀವಿಜಯಾಭ್ಯುದಯಶಾಲಿವಾಹನ
[2]ಶಕವರುಷಂ೧೪೮೯ನೇವರುಷಕ್ಕೆ ಸಲು
[3]ವಉತ್ತಮಂಬಿಸಿಗೆಒಳಗಣಧಾತು
[4]ಸಂವತ್ಸರದಕಾರ್ತಿಕಶು೧೦ಲುಶ್ರೀ

5 ಮನ್ಮಹಾರಾಜರಾಜಾಧಿರಾಜಪರಮೇಶ್ವ
6 ರಶ್ರೀವೀರಪ್ರಥಾಪಉಳಕೃಷ್ಣರಾಯಮ
7 ಹಾರಾಯರುಪೃಥ್ವೀರಾಜ್ಯಂಗೆಯಿಉತ್ತಿ
8 ರಲುಆವರಕಾರ್ಯ್ಯಕೆಕರ್ತ್ರರಾದಉ
9 ಗರಮಾದೆನಾಯಕರುಅರಿಸಿನಗುಂಟೆ
10 ಯಪ್ರರದಜಗ್ಗಯವೀರಂಣಒಡೆಯರು
11 ದೇವರಿಗೆಕಾರ್ತ್ತಿಕಶು೧೦ಯಲಿಮಂಗಳವಾ
12 ದಿನದಲುಶ್ರೀವಿರೂಪಾಕ್ಷನಸಂನಿಧಿ
13 ಯಲಿಕೊಟ್ಟಪುರದಧರ್ಮಶಾಸನದ
14 ಕ್ರಮವೆಂತೆಂದರೆಕೃಷ್ಣರಾಯಮಹಾ
15 ರಾಯರುನಮಗೆನಾಯ್ಕತನಕ್ಕೆಪಾಲಿಸಿದ
16 ಸೋಲೂರಸೀಮೆಒಳಗಣಅರಿಸಿನಗುಂ
17 ಟೆಯಪುರಕ್ಕೆನೀಉಪ್ರಕುಜೋಡಿಯತೆ
18 ತೆಂಬರಲಾಗಿಕೃಷ್ಣರಾಯಮಹಾರಾಯರಿಗೆ

(ಹಿಂಭಾಗ.)

19 ಧರ್ಮವಾಗಬೇಕೆಂದುರಾಯರಿಗೆನಾವು
20 ವಿನ್ನಹವಮಾಡಿಆಜೋಡಿನುಬಿಡಿಸಿನಿವ.ಗೆಸ
21 ರಿವಮಾನ್ಯವಾಗಿಕೊಟ್ಟಸಂಮಂಧಯಿಾ
22 ಪುರಕ್ಕೆಸಲುವಂಥಾಚತುಸ್ಸೀಮೆಒಳಗಾದ
23 ನಿಧಿನಿಕ್ಷೇಪಜಲಪಾಷಾಣಅಕ್ಷೀಣಿಆಗಾ
24 ಮಿಸಿದ್ಧಸಾಧ್ಯಂಗಳೆಂಬಅಷ್ಟಭೋಗತೇಜ
25 ಸ್ವಾಮ್ಯಗಳಂಕಸುವರ್ಣದಾಯಮುಂತಾದ
26 ಸರ್ವ್ವಪಿನಂಬಾದನೂಆಗುಮಾಡಿಕೊ
27 ಂಡುನೀಉಆಚಂದ್ರಾರ್ಕಸ್ಥಾಯಿಯಾ
28 ಗಿಸುಖದಿಂಅನುಭವಿಸೂದುಎಂದುಕೊ
29 ಟ್ಟಪುರದಧರ್ಮಶಾಶನ | ಸ್ವದತ್ತಂದ್ವಿಗುಣ
30 ಂಪುಣ್ಯಂಪರದತ್ತಾನುಪಾಲನಂ । ಪರ
31 ದತ್ತಾಪಹಾರೇಣಸ್ವದತ್ತಂನಿಷ್ಫಲಂಭವೇತ್
32 ದಾನಪಾಲನಯೋರ್ಮಧ್ಯೇದಾನಾತ್ಶ್ರೇಯೋನು
33 ಪಾಲನಾಂ | ದಾನಾಸ್ವರ್ಗಮವಾಪ್ನೋತಿ
34 ಪಾಲನಾದಚ್ಯುತಂಪದಂ || ಶ್ರೀವೀರಭದ್ರ ।
35 ಯಿಾಪುರಕ್ಕೆಆರೊಬ್ಬರೂತಪ್ಪಿದರೇವಾರ
36 ಣಾಶಿಯಲಿಗೋವಕೊಂದಪಾಪಕ್ಕೆಹೋಹ
37 ರು | ಬ್ರಾಹ್ಮಣರಕೊಂದಪಾಪಕ್ಕೆಹೋಹ
38 ರು । ತಂಮತಾಯಿತಂದೆಯಕೊಂದಪಾ
39 ಪಕೆಹೋಹರು

## 69

ಅದೇ ಹೋಬಳಿ ಸೋಮೇದೇವನಹಳ್ಳಿ ಬಸವನಗುಡಿಯ ಗೋಡೆಗೆ ಸೇರಿದ ಕಲ್ಲು.

ಪ್ರಮಾಣ 4' × 2'

1 ಸಿದ್ಧಾರ್ತಿಸಂವಚ್ಛರದ
2 ಪುಸ್ಯಬಹುಲರಾಮಪ್ಪ
3 ರಾಉತರುಸೋಲೂರನೀಲ
4 ಗಿರಿಯಾತಿರುಮಲಿದೇವ
5 ರಿಗೆಕೊಟ್ಟಪುರ

## 70

ಅದೇ ಹೋಬಳಿ ರಾಮನಹಳ್ಳಿ ಗ್ರಾಮದ ಬಸವಂಣನ ದೇವಸ್ಥಾನಕ್ಕೆ ದಕ್ಷಿಣ ಬಂಡೇ ಮೇಲೆ.

1 ಸಾವರ್ರಿಸಂವತ್ಸರದಫಿತಿಆಶ್ವೀಜ
2 ಬಹುಳಶ್ರೀಮತುಸೋಲೂರಕೆಂ[.]
3 ಉಡೀರಮಕ್ಕಳುಬೊ...ಪ್ರೋಡೆಯ
4 ನಹಳಯ......

(ಮುಂದೆ ಕಾಣುವದಿಲ್ಲ.)

## 71

### ಅದೇ ಹೋಬಳಿ ಗೋರೂರು ಗ್ರಾಮಕ್ಕೆ ಪೂರ್ವದ ಮೋಣಿಯಲ್ಲಿ ಬಿದ್ದಿರುವ ಕಲ್ಲು.

ಪ್ರಮಾಣ 7′ × 2′ 10″.

[1]ಸ್ವಸ್ತಿಶ್ರೀಗಣಾಧಿಪತ್ಯಾಯನಮಃನಮಸ್ತುಂಗಸಿರಸ್ತುಂಗಚಂದ್ರಚಾಮರಚಾರವೇ......
[2]ಕ್ಯನಗರಾರಂಭಮೂಲಸ್ತಂಭಾಯಶಂಭವೇ . . . . . . . . . . . . ನಿ
[3]ತ್ಯೋದ್ಭಾಸಿಮ್ರಿಣಾಳಕೋಮಳಲಸತ್ಪ್ರೋತ್ತುಂಗದಂಷ್ಟ್ರಾಗ್ರಭೃತಂಕ್ಷೋಣೀಚಕ್ರಮಃಪ್ರಸಾ...
[4]ರಿತಪಯಃಪೂರಾಭಿರಾಮಂಮಹತ್ ‖ ಸಾನಂದಂವಿಕಸತ್ಸರೋರುಹಧಿಯಾ
[5]ಸದ್ಯಸ್ಸರೋಜಾಲಯಾಮಾರೂಢಾಂ......ಹಸತಃಪ್ರೋತ್ರಿಹರಿಃಪಾತವಃ ‖
[6]ನಾರಸಿಹ್ಮಮಹೀಪಾಲ.... ... ... .. ... ... ... ...
[7]... ... ... ... ...ಸ್ವಸ್ತಿಸಮಸ್ತಭುವನಾಶ್ರಯಶ್ರೀಪ್ರಿಥ್ವೀವಲ್ಲಭಂಮ
[8]ಹಾರಾಜಾಧಿರಾಜಪರಮೇಶ್ವರಂ । ದ್ವಾರಾವತೀಪುರವರಾಧೀಶ್ವರಂಯಾದವಕುಳಾಂಬರ
[9]ದ್ಯುಮಣಿಸರ್ವ್ವಜ್ಞಚೂಡಾಮಣಿಮಲೆರಾಜರಾಯಮಲೆಪರೊಳುಗಂಡಗಂಡಭೇರು
[10]ಂಡಕದನಪ್ರಚಂಡ । ನಸಹಾಯಶೂರ । ನೇಕಾಂಗವೀರಶನಿವಾರಸಿದ್ಧಿ । ಗಿರಿದು
[11]ರ್ಗಮಲ್ಲಚಲದಂಕರಾಮವೈರೀಭಕಂಠೀರವ । ಪಾಂಡ್ಯಗಂಡಸ್ತಳವಜ್ರ......
[12]... ... ...ದ್ದ್ರನಮಕರ...ರಾಜ್ಯನಿರ್ಮ್ಮೂಳ...ರಾಯ...ಚಾರ್ಯ್ಯವರ್ಯ್ಯ .
[13]...ಸಮ ... ... ... . . .ಚಕ್ರವರ್ತಿಹೊಸಣ... ... ... . . . . .
[14]...ಶ್ರೀ ... ... ...ಗರುಡ ... ... ... ... ... ...ಯಬಿತ್ರ
[15]ಭಾನುಸಂವತ್ಸರದವೈಶಾಖಸುದ್ಧ ೫ ಗುರುವಾರ... .... . . . . . . . . . . . . .
[16]ದೇವರಮೇಲೆ..... . ರದಾ... .... . . ತ್ರಿಕ . ದೀನರ . . .
[17]......ಕರಮ್ರುತ... .... ... ... . . .
. . . . . . . . . . . . . . . . . . . . . . . . . . . . . . . . .
[27]ವರಾದೀನರದ...ವರಶ್ರೀಮದ... . . . . . .
[28]... ... ... ... ... ... ... ... ...... . . . ಅಗರಾಯನನಾಹ... .... . . ...
[29]ರಷರುಂವಾ ... .... . . . ... ... ...ಜಗದ್ದಳನ...
[30]ರಾಯ...ವರಜಗದ್ದಳ. . . . . . . . ... ... ... . . . ...
[31]... ... ... ... ... ... ... ... ... ... ... .... . . . ... .... . .
[33]. . . ... . . . ... ... ... ... ... ... ... ... ...ರಿನ . ಕಥಾರಾ...ವಾಹ...
[33]ರಾಯನ...ಮಾ . ಪಟಹರಣ . ದ್ದ್ರರಾಮ... ...ನವಿಕ್ಕೆ—ಚಾಳವಾ
[34]ಡಿಯಬವರದ... ...ವರಗಜ... ... ... ... ... ... ... ...
[35]...ಬ್ರಹ... ... ... ... ... ...ದೇವರ...ಕಾರುಣ್ಯಬೆ... ...
[36]... ... ... ... ... ... ... ...ಅವರಹೆ... ...ಣವಿತ್ತ್ಯಮಹಿಳೇಶ್ವರದೇವರ...
[37]... ... ... ... ... ... ...ಳಗಣ... ...
[38]... ...ಪ್ರಸಿದ್ಧಸ್ತೀವಾ... ... ... ... ... ...

[39] . . . . . . . ... ... ...ಕನಾರಸಿಂಹದೇವರ... . ವಿಕ್ರಮಪಟ್ಟಣೇಶ್ವರ...
[40]ದೇವರಿಗೆ . . . ಶ್ರೀಕಾರಿಯ... ...ಕೈವಾರು...ಸಲ್ಲುವ . . . .
[41]ಶಿವಪುರವಾದ . ರಚೇರವಣ... ... ... ... ... ... . . .
[45]... .ಸ್ವದತ್ತಾಂಪರದತ್ತಾಂವಾಯೋಹರೇತಿವಸುಂಧರಾಂಷಷ್ಟಿರ್ವರ್ಷಸಹಸ್ರಾಣಿ
[46]ವಿಷ್ಟಾಯಾಂಜಾಯತೇಕ್ರಿಮಿಃ । ದಾನಪಾಲನಯೋರ್ಮಧ್ಯೇದಾನಾಛ್ರೇಯೋನು
[47]ಪಾಲನಂದಾನಾತ್ಸ್ವರ್ಗಮವಾಪ್ನೋತಿಪಾಲನಾದಚ್ಯುತಂಪದಂ। ಸಾಮಾನ್ಯೋಯಂಧ
[48]ರ್ಮಸೇತುರ್ನೃಪಾಣಾಂಕಾಲೇಕಾಲೇಪಾಲನೀಯೋಭವದ್ಭಿಃಸರ್ವಾನ್

(ಮುಂದೆ ೫ ಪಙ್ಕ್ತಿಗಳು ಹೋಗಿವೆ.)

[54]ಶ್ರೀವೀರನಾರಸಿಂಹದೇವರಸರುಸಕವರ್ಷಂಗಳು೧೦೦೦ನೆಯಚಿತ್ರ
[55]ಭಾನುಸಂವತ್ಸರದವೈಸಖಸುಧ೧೫ಗುರುವಾರದಂದು

## 72

ಅದೇ ಗ್ರಾಮಕ್ಕೆ ಪೂರ್ವಪಾಳು ದೇವಸ್ಥಾನದ ಬಾಗಿಲ ಎಡಭಾಗದ ಗೋಡೆಯ ಕಲ್ಲಿನಲ್ಲಿ.

[1]ಗೊರಉರವುರದ
[2]ವೊಳಗಣಭೂಮಿ
[3]ಯಲಿಮಲಚ
[4]ಯನುಅಲಪ್ಪಗೆ
[5]ಗೊ ... ಗೆಉ
[6]ಖಂಡುಗಗದ್ದೆ
[7]ಯಖಂಡುಗ
[8]ಕೆಯನುಧಾರೆ
[9]ಯಹಡದ
[10]ರುಧರೆಯಚ
[11]೦ದ್ರನುಉಳಂ
[12]ನಕಸಲುಹುದು

## 73

ಅದೇ ಹೋಬಳಿ ಬ್ಯೆರಾಪುರದ ಬೆಟ್ಟದ ದಕ್ಷಿಣ ಭಾಗದ ಗುಂಡಿನಲ್ಲಿ.

[1]ಕೆಂಪಗೊಂಡಪ್ರಿತಿವೀರಾಜ್ಯಂಗೆಯಿಮಲಿದಿಹ...
[2]ರಾಯನಪುರ

## 74

ಅದೇ ಹೋಬಳಿ ಬಾಣವಾಡಿ ಗ್ರಾಮಕ್ಕೆ ಉತ್ತರ ಮೂಕನಾಲೇಶ್ವರ ದೇವಾಲಯದ ಬಳಿ.

(ಪೂರ್ವದ ಹಳಗನ್ನಡಕ್ಷರ)

[1]... ... ... ... . . .
[2]...ಮ. . .ಮರ . . ...
[3]...ತ್ರಿಬ್ಬ...ಬಿ...
[4]... ... ... ... . . .
[5]. . ... ...ಲಿರೆ . . . .
[6]ಗನ್ನಮ್ಮಡಿದದೇಗುಲದಪೂಜ . .
[7]. . ಣ್ಣಾಗಮದುವುಸಲ್ವುದು
[8] . . ದಿಸಲಿಸ . ನ್ನವೂರಯ್ಯ
[9] . . ನೞುವೊಂಬಾರಣಾಸಿಯು
[10] . . . ಮಂಕವಿಲಿಯುಮನೞಿದೊ

## 74

### ಅದೇ ಗ್ರಾಮದ ದೊಡ್ಡಕೆರೇ ಕೋಡೀ ಬಳಿ ನಟ್ಟ ಕಲ್ಲು.

ಪ್ರಮಾಣ 5 10 × 3

[1]ಶುಭಮಸ್ತುಸ್ವಸ್ತಿಶ್ರೀಜಯಾಭ್ಯುದ
[2]ಯಶಾಲಿವಾಹನಶಕವರುಷಂ೧೪೭೭ನೆ
[3]ಯುದರಕ್ಷವಂಗಸಂವತ್ಸರದಶ್ರಾವಣಬ ೩೦
[4]ಸೋಮವಾರಪುಣ್ಯಕಾಲದಲಿಶ್ರೀಮನ್ಮಹಾ
[5]ರಾಜಾಧಿರಾಜಪರಮೇಶ್ವರಶ್ರೀವೀರಪ್ರತಾ
[6]ಪಸದಾಶಿವರಾಯರುಪ್ರುಥುವೀರಾಜ್ಯಂ
[7]ಗೈಯುತಯಿರಲುಶ್ರೀಮನ್ಮಹಾ
[8]ಮಂಡಲೇಶ್ವರ । ಸಲಕರಾಜಚೆಂನಯ
[9]ದೇವಮಹಾಅರಸುಗಳಕಾರ್ಯಕೆಕರ್ತ
[10]ರಾದಮುದುಗಟ್ಟಪಂಡಿತಯ್ಯನವ
[11]ರೂ । ಸದಾಶಿವಮಹಾರಾಯರಿಗೆಪು
[12]ಣ್ಯವಾಗಬೇಕುಯೆಂದು । ಬಾಣವಾಡಿಯ
[13]ವೀರಭದ್ರದೇವರಿಗೆಬಾಣವಾಡಿಯುಸ್ತ್ಥಳ
[14]ದರಾಮಾಪುರದಗ್ರಾಮುವಂನುಮಂಗಳಾರ
[15]ತಿನೈವೇದ್ಯಕೆಪಾಲ್ಸಿದರೂ । ಯಿದಕೆಅವ
[16]ನಾನೊಬ್ಬನುಅಳುಪಿದರು । ವಾರಣಾಸಿಯ
*..............
[19]ವಾಪಕ್ಕೆಹೋಹ
[20]ರುಬ್ರಾಹ್ಮಣನ
[21]ಕೊಂದ.........
[23]..............
[33]ಯತಂದೆತಾ
[24]ಯುಕೊಂದಪಾ
[25]ಪಕ್ಕೆಹೋಹರು

### ಅದೇ ಹೋಬಳಿ ಉಡುಕುಂಟೆ ಮಜರೆ ಮೂಡ್ಲುಪಾಳ್ಯದ ಪಾಳು ಮೂಗಸಾಲೆ ಗುಡೀ ಬಳಿ ಬಿದ್ದಿರುವಕಲ್ಲು;

ಪ್ರಮಾಣ 6' × 3'

[1]ಸ್ವಸ್ತಿ...ಸಕನೃಪಕಾಲಾ
[2]ತೀತಸಂವತ್ಸರಸತಂಗಳೆ
[3]ಣ್ಟುನೂಱಎಣ್ಬತ್ತಒಂಬತ್ತನೆಯ
[4]ಕ್ರೋಧಿನಯೆಂಬಸಂವತ್ಸರಂ
[5]ಪ್ರವರ್ತ್ತಿಸುತ್ತಿರೆಕನ್ನರದೇವಪ್ರಿ
[6]ತುವೀರಾಜ್ಯಂಗೆಯ್ಯುತ್ತಿರೆದುರ್ವಿ
[7]ನೀತನಾಮಮ್ಮ......ದನಮಗಗಂ
[8]ಗಭೀಮಮಣ್ಣೆಸೀಮಾ...ಚತು...
[9]ಕ | ಸ್ವಸ್ಥಿಯ್ಯನವರ...ಣಧಾ...
[10]ಕ್ರತಸತ್ಯಶೌಚ . . ಶೀಲಸಂಪ
[11]ನ್ನ . ಸಿದೆದೇಗುಲ ....ನೆಕ್ಕೆಸಲ್ವ
[12]ದು...ರುವ್ರೊರೊಳೆಧಾಳಿಗೆಯ್ವಲಿ
[13]ಜಯೋದ್ಯೋಗಿಶ್ರೀಮಣ್ಣೆನಾಡುಮೂ
[14]ನೂಱಾ . ನಾಡ್ಗಾವುಣ್ಡಂಗಂಗ
[15]ಬ್ಬೆನಪಿರಿಯಮಗಂದಡಿಗಂ
[16]ವಯ್ಕೊನ್ಧವಾಸಿಯುದೊಳೆ
[17]ದಡಿಗೇಸ್ವರಮೆನಪ್ಪದೇಗುಲ
[18]ಮಂಮಾಡಿಸಿದಂದೇಗುಲ
[19]ಕೆಸಲ್ವುದುದೇವರಕೆಱೆ
[20]ಯಮೂಡೆಣಕಡೆಗೋಡಿನ
[21]ಲಿಪೆಗ್ಗೆಱೆದ್ದಿಬಣ್ಡಿಗಂಸ
[22]ಲ್ವುದುದೇವಬಡಗಣದೆಸೆಯೊ
[23]ಳ್ಬಣ್ಡ . . ಸಲ್ವುದುಇದೇಗ
[24]ಲದಧರ್ಮ್ಮಂದಡಿಗಂಗೆಸಲ್ವು
[25]ದುಮಙ್ಗಳಮಹಾಶ್ರೀಇದೇಗುಲ
[26]ಮಂಗಂಗಾಚಾರಿಬೆಸಗೆಯ್ದಂ

---

* ಮೇಲ್ಭಾಗದಲ್ಲಿ ಬರೆದಿಧೆ.

## 76

ಅದೇ ಹೋಬಳಿ ಸಿರಗನಹಳ್ಳಿ ಗ್ರಾಮಕ್ಕೆ ದಕ್ಷಿಣ ೬ನೇ ನಂಬರು ಜಮೀನಿನಲ್ಲಿ ಹುಟ್ಟು ಗುಂಡಿನಮೇಲೆ.

[1]ಸ್ವಸ್ತಿಶ್ರೀಮತು
[2]ವಿಷ್ಣುವರ್ದ್ಧನಹೋಯ್ಸಳ
[3]ಸಣಪ್ರತಾಪವೀರ
[4]ನಾರಸಿಂಗದೇವನರಾಜ್ಯದಂ
[5]ದುಗಂಗಿಸೆಟ್ಟಿಯರಮಗಪಾಪಿಸೆಟ್ಟಿ
[6]ಯರುನಾರಸಿಂಗಸ್ವಾಮಿಗಳಿಗೆ
[7]ಧಾರಾಪೂರ್ವಕವಾಗಿಕೊಟ್ಟಕೆಱೆ

## 77

ಅದೇ ಹೋಬಳಿ ಎಣ್ಣಗೆರೆ ಗ್ರಾಮಕ್ಕೆ ಉತ್ತರ ಗಂಗಾಧರೈಯ್ಯನ ಹೊಲದಲ್ಲಿರುವ ಸಣ್ಣ ಬಂಡೆ.

[1]ಯಿದುಭೀಮನಾಯಕರೊ
[2]ಟ್ಟನೆತರುಕೊಡಗಿಯಿ
[3]ದನಾವಘನಳುಪಿದವನಹೆಂ
[4]ಡತಿತೋಟಕೇ . .

## 78

ಅದೇ ಹೋಬಳಿ ವಡ್ಡರ ಹಳ್ಳಿ ಗ್ರಾಮಕ್ಕೆ ಪಶ್ಚಿಮ ಕಂಡಪ್ಪನ ಹೊಲದಲ್ಲಿ.

ಪ್ರಮಾಣ 6′ × 3′ 2″

[1]ಶ್ರೀಪ್ರಮಾಥಿಸಂವತ್ಸರದಮಾ
[2]ಘಸುದ್ಧ ೧ ಗುರುವಾರದಂದುಶ್ರೀಮ
[3]ನುಮಹಾಪ್ರತಾಪಚಕ್ರವರ್ತಿರಾಯ
[4]ಹುಲಿರಾಯಗಂಡಭೇರುಂಡಹೊ
[5]ಯಿಸಣೇಶ್ವರಶ್ರೀವೀರಬಲ್ಲಾಳದೇವರಬಿ
[6]ಸದಿಂ . ಮುಡಿಯಮಲೆಯನಾಯ
[7]ಕನಮಗಬಸುವಯ್ಯನಾಯಕನಾನಿ
[8]ಜನಾಡಯೆಂಗೆಗೆಱೆಸ್ತಳವೆಳು
[9]ವಕಾಲದಲಿಶ್ರೀಮನುಮಹಾಹವಡಬ್ಬ
[10]ವಹಾರಿಉಬೆಯನಾನಾದೇಸಿಯಗ್ಗ್ರಮು
[11]ಖ್ಯರಪ್ಪಬಾನವಾಡಿಯುಕಲಿನಾತ
[12]ಸೆಟ್ಟಿಯರುಬಲ್ಲಾಳಸೆಟ್ಟಿಯುಬೊ
[13]೬ಮಂಣನಮೊಳಗಾದಸಮಸ್ತ
[14]ಪ್ರಜೆಗವುಡುಗಳಪುರಪತಿಗಳುಬೀ
[15]ಜಗಉಡನಮಕಳುಹಿರಿಯನಾರ
[16]ಣಗಉಡಬಯಿರಪ್ಪಬೆಕನಾರಣಗ
[17]ಉಡನಾವರಿಗೆಮಲಾಸಮುದ್ರವನು
[18]ಕೊಡಗಿಯಾಗಿಕಲನಟುಕೊಟ್ಟರುಭು
[19]ಮಿಚಂದ್ರನುಳಂನಕಸಲುಉದುನಾ
[20]ಯಕರಒಪ್ಪಶ್ರೀಅಲನಾಥನಾಡಬಿ
[21]ಪ್ಪಶ್ರೀಗಂಗನಾಥಸುಕದಿಂಬಾಳುವಂ
[22]ತಾಗಿಮಾಡಿದಕೊಡಗಿಶ್ರೀಶ್ರೀಶ್ರೀ

## 79

ಅದೇ ಹೋಬಳಿ ಬಿಟ್ಟ ಸಂದ್ರ ಗ್ರಾಮದ ಊರಮುಂದೆ.

ಪ್ರಮಾಣ 4′ × 1′ 8″

[1]ನಮಸ್ತುಂಗಸಿರಸ್ತುಂಗಾಚಂದ್ರಾಚಾಮರ
[2]ಚಾರಮೆತ್ರೈಲೋಕ್ಯನಗರಾಳಂಶಾತಮೂ
[3]ಲಸ್ತಂಭಾಯಶಂಭವೇಸ್ವಸ್ತಿಶ್ರೀಜಯಾಭ್ಯುದಯಶಾ
[4]ಲಿವಾಹನಸಖವರುಷ ೧೪೩೩

[27]ನೇಪ್ರಜೋತ್ಪತ್ಯಸಂಭರದ...
[28]ಶಕ್ರಬ ೩೦ ಆ . , ...ವು
[29]ತ್ಯಕಾಲದಲುಶ್ರೀಮಂಮಹಾ
[30]ಗಜಬೇಟೆಕಾಱಪೇಸಾಗಕೆಹ
[31]ನುಮಶ್ರೀಗಂಗಾಧರದೇವರ
[32]ನಾಮಾಂಕಿತಪಾದಶ್ರೀವೀರ
[33]ಚಿಕ್ಕವೊಡೆಯರುಪ್ರಸಂನಗಂ
[34]ಗಾಂಧರದೇವರಿಗೆಅವಃಪ್ರತಪ
[35]ಡಿಗೆಕೊಟ್ಟಬಿಟ್ಟಸಮು
[36]ದಾಯಿದಕೆಆಳುಪಿದರೆ
[37]ಕುಂಭೀಪಾಕಕೆಹೋ
[38]ಹರು

## 80

ತಾವರೇಕೆರೆ ಹೋಬಳಿ ತಾವರೇಕೆರೆ ಗ್ರಾಮಕ್ಕೆ ಪಶ್ಚಿಮ ಮಾಗಡೀರೋಡ ಬಳಿ ನಟ್ಟವೀರಕಲ್ಲು.

[1]...........ಇದುವ್ಬುಗಾವುಣ್ದ್ನಮಯ್ಯ
[2].....ಜಿಗನೂರಲ್ಲಿಳ್ಳಲೆಕಾದಿಸತ್ತು
[3]ಶ್ರೀಆ . .
[4]ವವ್ಮ್ಮಚ
[5]ರಿಯಬೆ
[6]ಗಂ . ಯು
[7]ಕಲು

## 81

ಅದೇ ಹೋಬಳಿ ಬೈಚಗುಪ್ಪೆ ಗ್ರಾಮಕ್ಕೆ ದಕ್ಷಿಣ ನಂಜುಂಡೈಯ್ಯನ ಹೊಲಪಲ್ಲಿ

ಪ್ರಮಾಣ 7' × 5'

[1]ಶ್ರೀವಿಕ್ರಮಸಂವತ್ಸರದಆಸಾಡಸು ೧೦ ಸೋಂದು
[2]ಶ್ರೀಮಃಪ್ರತಾಪಚಕ್ರವತ್ರಿಹೊಯಿಸಣಶ್ರೀವೀರಬಲ್ಲಾ
[3]ಳದೇವರ್ಸಕುಮಾರಶ್ರೀಮಃಮಹಾಸಾಮಂತಾಧಿನರಲೋ
[4]ಕಗಂಡಮಯಿಲಿನಾಯಕಜಂನಿನಾಯಕಕಾಟಿನಾಯುಕ
[5]ಶ್ರೀಮಃಮಹಾಕುಕ್ಕಲನಾಡವಭುಕಿತ್ತನೆಲ್ಲಿಯುಹೊಂನಗವುಡೆರ
[6]ಮಕಳುಚಿಕ್ಕಂಣಹೊನ್ನಪ್ಪವಮ . . ಯುಪ್ಪಮಂಚಪ್ಪಚಿಕಹೊಂ
[7]ನಪ್ಪಸೆಟ್ಟಿಯಾಡಸೆಟ್ಟಿಚಿಕ್ಕಮಾಲಿಚಾಡಪಬಂನಿಕಪಹೊಂನಪ್ಪ
[8]ವೀರಯ್ಯನೊಳಗಾದಸಮಸ್ತಗವುಡುಅಹೊಂನಪ್ಪನಮಗಳು
[9]ಬಮಿಚವ್ವೆಗೆದಂಡಿಗಿಯುಬೀಯುಕೆಕೊಟ್ಟತಾವರೇಕೆಱ
[10]ಹೊಲದೊಳಗಣಅಬಮಿಚವೆತಂನಹೆಸರಹಳ್ಳಅದಕ್ಕೆಸಲ್ವ
[11]ಚಟ್ಟನಕುಂಟಿಅಂಣಿದೇವನಮಗಹೊಂನಪ್ಪಹಾರಿಯುಪನಮಗ
[12]ದೇವಪಭೂಾರವಅಂಣತಂಮಯಿವರುಬಮಿಚವೆಹಡೆದ
[13]ಯಿಕೊಡೆಗಿಯುಅನುಬೋಗಿಸುವರುಆಹಳಎನುಹುಟ್ಟಿತತಪ್ಪಿ
[14]ತಲುಡಿದಂಡಕಾಣಿಕೆಕಂದಾಯುಬಿಟ್ಟಸರ್ಬ್ಬಮಾಂನ್ಯಚಂದ್ರಾದಿತ್ಯ
[15]ಕಾಲಯಿಕೊಡಗಿತಪ್ಪಿದವರುಗಂಗೆತಡಿಕವಿಲೆಕೊಂದಪಾಪದಲಿಹೋಹರು
[16]ಯಿಂತಪ್ಪುದಕೆನಾಯ್ಕರವೊಪ್ಪಶ್ರೀದಾಮೋದ್ರಪೆರವಾಳರೊ

[17]ಪ್ಪಶ್ರೀವೀರನಾಥಯಿಂತಿವರುಜೆಏಂಕೇಸವನು
[18]ರಹಊರಹೆಸರುಬಯುರಪ್ಪೆಹಳ್ಳಿಸರ್ಬ್ಬಕೊಡಗಿಮಂಗಳಮಹಾಶ್ರೀ

## 82

### ಅದೇ ಹೋಬಳಿ ಮಾರೇನ ಹಳ್ಳಿ ಆಂಜನೇಯ ದೇವಸ್ಥಾನದ ಹಿಂಭಾಗದಲ್ಲಿ.

ಪ್ರಮಾಣ 6′ × 3′

[1]ಸ್ವಸ್ತಿಶ್ರೀವಿಜಯಾಭ್ಯುದಯಶಾ
[2]ಲಿವಾಹನಶಕವರ್ಷ ೧೪೪೬ ನೆಯ
[3]ತಾರಣಸಂವತ್ಸರದಮಾರ್ಗಸಿರಶುದ್ಧ ೨ಶನಿ
[4]ಸ್ವಸ್ತಿಶ್ರೀಮನ್ಮಹಾರಾಜಾಧಿರಾಜರಾಜಪ
[5]ರಮೇಶ್ವರಶ್ರೀವೀರಭುಜಬಲಪ್ರತಾಪಗಜಪತಿಅ
[6]ಶ್ವಪತಿವಿಜಾಡಶ್ರೀಕೃಷ್ಣದೇವಮಹಾರಾಯಲು
[7]ದರಾಬ್ಬಿಚಂದ್ರಶ್ರೀತಿರುಮಲದೇವಮಹಾರಾಯ
[8]ರಕಾಲದಲುಶ್ರೀಮನ್ಮಹಾಸೇನಾಸಾಳುವಚತುಸ
[9]ಮುದ್ರಾಧೀಶ್ವರತಿಂಮಂಣದಣ್ಣಾಯಕ್ಕರದೇಶ
[10]ದಲುಸ್ವಸ್ತಿಶ್ರೀಅಭಿನವಕಾಂಚೀಸಮಾಕಲುಉರ
[11]ವರದರಾಜದೇವರಉತ್ತಮಸಂಧಿದದ್ಯಂನದವಸರಕೆ
[12]ಶ್ರೀಕೃಷ್ಣದೇವಮಹಾರಾಯರಿಗೆಗಂಗೋದಕಸೇವಿತರಪ್ಪ
[13] . . ಯಕೋನಪನಾಯಕರುತಿರುಮಲದೇವಮಹಾರಾಯ
[14]ರಿಗೂತಿಂಮಣ್ಣಡಣಾಯಕರಿಗೂಧರ್ಮವಾಗಬೇಕುಯೆಂದು '75
[15]ಮಾರಯನಹಳ್ಳಿಗೆಪ್ರತಿನಾಮದಣಯಕಪುರವನೂಕೋನ
[16]ಪನಾಯಕರುವರದರಾಜದೇವರಿಗೆಸಮರ್ಪ್ಪಿಸಿದರುತಾಉ
[17]ಮಾಡಿದಸೇವೆಆಚಂದ್ರಾರ್ಕಸ್ಥಾಯಿಯಾಗಿನಡೆಯಬೇ
[18]ಕೆಂದುಮಡಿದಸೇವೆಅವನಾದರುಕಂಟಕರಾ
[19]ದವರುಗೋಉಬ್ರಮಣನುತಂಮತಂದೆಯಮಾರಣ
[20]ಸಿಯಲಿಕೊಂದಪಾಪದಲಿಹೋಹರುಅರುಪಲದು

# DODBALLAPUR TALUQ.

## ದೊಡ್ಡಬಳ್ಳಾಪುರ ತಾಲೂಕು.

### 1

**ಹುಲ್ಲುಕುಂಟೆಹೋಬಳಿ ಲಿಂಗಾಪುರದ ಲಕ್ಷ್ಮೀದೇವೀ ದೇವಸ್ಥಾನದ ಗರ್ಭಗೃಹದಲ್ಲಿ ನೆಟ್ಟಕಲ್ಲು.**

ಪ್ರಮಾಣ 6′ 6″ × 2′ 3″

[1]ಶುಭಮಸ್ತು ಸ್ವಸ್ತಿ ಶ್ರೀಜ
[2]ಯಾಭ್ಯುದಯಶಾಲಿವಾ
[3]ಹನಶಕವರುಷ೧೪೫೨
[4]ನೆಯಪ್ರಮೋದೂತಸಂವತ್ಸ
[4]ರದಕಾರ್ತಿಕಶು೧೦ಸೋ
[6]ಶ್ರೀಮನ್ಮಹಾರಾಜಾಧಿರಾ
[7]ಜರಾಜಪರಮೇಶ್ವರಭಾಷೆ
[8]ಗೆತಪ್ಪುವರಾಯರಗಂಡ
[9]ಮೂವರರಾಯರಗಂಡಪೂ
[10]ರ್ವದಕ್ಷಿಣಪಶ್ಚಿಮಸಮುದ್ರಾ
[11]ಧೀಶ್ವರಶ್ರೀಕೃಷ್ಣರಾಯಮಹಾ
[12]ರಾಯರುಪ್ರಥ್ವೀರಾಜ್ಯಂಗೆಯು
[13]ಉತ್ತಂಯಿರಲುಈರಾಮರತಂ
[14]ದನರಸಂಣನಾಯಕರೂತಂನ
[15]ಭುಜಬಲಪ್ರತಾಪದಿಂದನರಪ
[16]ತಿಸಿಂಹಾಸನರಾಜ್ಯನೆಲವನುಸಾಧ್ಯ
[17]ವಮಾಡಿಸ್ಥಿರರಾಜ್ಯಂಯಿದಆನರ
[18]ಸಂಣನಾಯಕರ . . .ಳವಾಯಿ
[19]ಗಂಡರಗೋ. . .ನಾಯ
[20]ಕರಮಕಳು. . . . .
[21]ಆತಂಮ . . . . .
(ಮಿಕ್ಕಾದ್ದು ಭೂಮಿಯಲ್ಲಿ ಹೂತುಕೊಂಡಿದೆ.)

### 2

**ಅದೇ ಹೋಬಳಿ ರಾಮಪುರಕ್ಕೆ ಉತ್ತರದಲ್ಲಿ ಬಿದ್ದಿರುವ ತುಂಡುಕಲ್ಲು.**

ಪ್ರಮಾಣ 2′ × 3′

[1] . .ಶುಭಮಸ್ತು ಸ್ವಸ್ತಿ ಶ್ರೀ
[2]ಶಾಲಿವಾಹನಶಕವರುಷಂ . . . . . .
[3]ವತ್ಸರದಆಷಾಢಶುದ್ಧ ೧೦ . . . . .
[4]ಡಲೇಶ್ವರರಾಜಾಧಿರಾಜರಾಜಪರ. . . . .
[5]ಪಅಚ್ಯುತರಾಯಮಹಾರಾಯ . . . . . . . .
[6]ಉತ್ತಂಯಿರಲುತಯಿರದಯ . . . .
[7]ಯನದರಾಯಣ . . . . . .
[8] . . . .ಜೊಮಿಪ್ಪೊಂಗೆ. . . .
[9] . . . .ಅಗ್ರಹಾರವಾಗಿ. . . . . . . .
[10]ಗ್ರಹಾರಕ್ಕೆ ಪ್ರಾಕಾಸಲುವಚತುಸೀಮೆ
[11] . .ನಾದಂನ. . . . .ಅಸ್ವಾನುಭೋವ
[12] . .ನ್ತ್ರಪಉತ್ರಪಾರಂಪರಿಯಾಗಿಅನುಭವಿಸಿ
[13] . . . . .ಯಲಾಗನ
[14] . . . . .ಕಲುಪಹತಿಯುಮಾಡಿ
[15] . . . . . . . . . . . . . . . .

## 3

**ಅದೇ ಹೋಬಳಿ ದೊಡ್ಡ ಬೆಳವಂಗಳದ ಚನ್ನರಾಯಸ್ವಾಮೀ ದೇವಾಲಯಕ್ಕೆ ಸಮೀಪದಲ್ಲಿರುವ ವೀರಕಲ್ಲು.**

ಪ್ರಮಾಣ 4′×6′

(ಪೂರ್ವದ ಹಳಗನ್ನಡಕ್ಷರ)

[1] ಸ್ವಸ್ತಿಶ್ರೀಮಹೇ
[2] ನ್ದ್ರಅರಸುಗೆಯೆ
[3] ಶ್ರೀಗಙ್ಗರಸಕಾದುಅರ
[4] ದಱೆಬಡೆಯೆ . . ಟ್ಕಿಕಾಕೊಮೋ
[5] ಸೆಹಟ್ಟಿದು . . . ವಿಯುಕಾಳಗದೊಳು
[6] . ಲಕಮ್ಮಡಿಪಿತಾನುಮಿನ್ದ್ರ
[7] ಲೋಕಪ್ರಾಪ್ತನಾದಕಲಮನಿ

## 4

**ಅದೇ ಸ್ಥಳದಲ್ಲಿ ವೀರಕಲ್ಲಿನ ತುಂಡು.**

ಪ್ರಮಾಣ 2′×2′6″

(ಪೂರ್ವದ ಹಳಗನ್ನಡಕ್ಷರ)

[1] ಅಣ್ಣಡಡಧರ
[2] ಹಟ್ಟಿಪರೆಯೆ
[3] ಮದಿಸತುಸಗಸ್ತನಾದ .

## 5

**ತಿಪ್ಪೂರು ಹೋಬಳಿ ತಿಪ್ಪೂರು ಗ್ರಾಮದಲ್ಲಿ ಕೋಟೆರಾಮಣ್ಣನ ಮನೆಯ ಸಮೀಪದಲ್ಲಿ.**

ಪ್ರಮಾಣ 7′ 6″ × 1′ 4″

[1] ಸ್ವಸ್ತಿಶ್ರೀಮತು
[2] ಸಾಲಿವಾಹನಸಕ
[3] ವರುಷಂಗಳು ೧೫೪೦
[4] ನೆಯುವ್ಯಯಸಂವತ್ಸ
[5] ರದಭಾದ್ರಪದಶು ೧ ಲೂ
[6] ಶ್ರೀಮನ್ಮಹಾಅ
[7] ಮತಿಯನಾಡಪ್ರಭು
[8] ಹಾವಳಿಬಯಪ್ಪಗ[ಉ]ಡರು
[9] ತಿಪೂರಲಿನಮಶಿವಾಯ
[10] ಕೆಂಪಿಸೆಟ್ಟಿಕಟ್ಟಿಸಿದಕಲು
[11] ಮಟಕ್ಕೆಬಿಟ್ಟುಕೊಟ್ಟಮೂ
[12] ಲಗಾಸಿನಕ್ರ[ಮ]ವೆಂತೆಂದರೆಹ
[13] ಣಪೇತಿಪೂರಸೀಮೆಯೊ .
[14] ಗಾಗಿಟೆಂಕಬಡಗಲುಮೂ
[15] ಡಪಡುಮಲುನಡಮಂ
[16] ತಾಪೂರುಗಳಲಿಮೂಲಿಕ
[17] ೦ಕೂ . . ರು ೧ ಕ್ಕೆ ಮೂಲಿ
[18] ಗಾಸು ೧ ಲೆಖದಲುತ
[19] ಕೊಂಬದುಯಿನಾಮೂಲಿ
[20] ಗಾಸಿನಸೀಮೇಮೇಲೆಬಂದ
[21] ಪಾರುಪತ್ಯಗಾರನ,ಗಲಿಸರ್ಕಾ
[22] ರದಗ[illegible]ಡಸೇನಬೋವರಾಗಲಿ
[23] ಸುಂಕದಮಣೇಗಾರನಾ
[24] ಗಲಿಆರುಯಿದಕೆವಿ

[25]ಗಡಆಚರಿಸಿವರು
[26]ಅವರುತಂದೆತಾಯು
[27]ಗಳವಾರಣಾಸಿಯಲಿ
[28]ಕೊಂದಪಾಪಕೆಹೋಹರು

## 6

### ಆದೇ ಗ್ರಾಮದ ಬಸವನ ದೇವಸ್ಥಾನಕ್ಕೆ ಪಶ್ಚಿಮ.

[1]ಸ್ವಸ್ತಿಶ್ರೀಮತು
[2]ಶಾಲಿವಾಹನಶಕ
[3]ವರುಷಂಗಳ್೧೫೦೮
[4]ನೆಯುವ್ಯಯಸಂವತ್ಸ
[5]ರದಭಾದ್ರಪದಶು ೧ ಲು
[6]ಶ್ರೀಮನ್‌ಮಹಾಅ
[7]ವತಿಯನಾಡಪ್ರಭು
[8]ಹಾವಳಿಬಯಪ್ಪಗಾಡರ
[9]ಕುಮಾರ........
[10] ..........

## 7

### ಅದೇ ಹೋಬಳಿ ಅಂತ್ರಹಳ್ಳಿಯ ವೀರಣ್ಣನ ಮನೆಗೆ ಪೂರ್ವದಲ್ಲಿ.

ಪ್ರಮಾಣ 6′ × 2′ 4″

[1]ಶ್ರೀರಾಮಾದುರ್ಮುಖಿಸಂವ
[2]ಚರದವಯಿಶಾಖಶು ೭ ಲು
[3]ಆವತಿನಾಡಪ್ರಭುಮುಂಮುಡಿ
[4]ಹವಳಿಯಬಯಿರವಗಾಡರುಸೊ
[5]ದ್ರಳಿಪಂಣೆಸೋಣಯ
[6]ಗೆಕಾಣಾಚಿಸಾಸನಹಾವ
[7]ಳಿಬರಪಗಾಡ್ರಅವಾಂತ್ರದ
[8]ಲುನಿಂನಬಿಗೆಗ್ರಾಮಗಳುಕ
[9]ವೀರವಾಗಲಾಗಿಅವಕಯ
[10]ಸಂಮುಂದೆನಿನಗೆಗಲುಡ
[11]ಗೊಡಗಿಅಂತರವಳಿಗ್ರಾ
[12]ಮದಲುಬೂರದಬಳಿಯ
[13]ಪೆಬಾಲಖಂಡುಗಯಿಾಕೆರೇ
[14]ಕೆಳಗೆಗದ್ದೆಖಂಡುಗ..
[15]ರವಬೂರವನುನಿನಗೆನಾಉ
[19]ಕೊಟೆವಾದಕಾರಣಯಿಾ
[17]ಮಾನ್ಯಗಳನೂನಿಂನಪುತ್ರಪಾ
[18]ತ್ರಪಾರಂಪರಿಯಾಗಿಆಚ
[19]ಂದ್ರಾರ್ಕಉಕೊ.....ಯಾ
[20]ಗಿಅನುಭವಿಸಿಬಹುದು
[21]ಯಿದಕಆರುತಪಿದರುತ
[22]ಂಮತಾಯಿತಪಿದವ
[23]ರು

## 8

### ಆದೇ ಹೋಬಳಿ ವಾಂಗರಹಳ್ಳಿಯ ಅಂಜನೇಯ ದೇವಸ್ಥಾನಕ್ಕೆ ಆಗ್ನೇಯದಿಕ್ಕಿನಲ್ಲಿ.

ಪ್ರಮಾಣ 4′9″ 3′4″

[1]ಸ್ವಸ್ತಿಶ್ರೀಜಯಾಭ್ಯುದಯಶಾಲಿ ।ಶ। ವರಷ೧೬೫೦
[2]ನೆಯವಿಭವಸಂವತ್ಸರದಪುಷ್ಯಶು....ಶ್ರೀಮತುಪ್ರ
[3]ತಾಪಚಕ್ರವರ್ತಿಹೊಯಿಸಣಭುಜಬಳವೀರಸೋಮೇಸ್ವ
[4]ರದೇವರಕುಮಾರವಿರೇಗಂಗದೇವನಾರಸಿಂಗದೇ
[5]ವರಸರುಪ್ರಿಥ್ವೀರಾಜ್ಯಂಗಯುತಿರಲುಶ್ರೀಮನ್‌ಬೀರ
(ಮುಂದೆ ಸಾಲುಗಳು ಕಾಣುವುದಿಲ್ಲ.)

## 9

ಅದೇ ಹೋಬಳಿ ಬೇಚಿರಾಕ್ ಜಕ್ಕಸಂದ್ರದ ಸುಣ್ಣಕಲ್ಲು ನಾಗಪ್ಪನ ಹೊಲದಲ್ಲಿ;

ಪ್ರಮಾಣ 5' × 4'

1 ಸ್ವಸ್ತಿಶ್ರೀಸಕವರುಷ...
2 ನ್ದನೆಯವರಿಷಪ್ರವರ್ತ್ತಿ...
3 ತ್ತಿರೆಬಹುಧಾನಿಸಂವಚ್ಛರ
4 ಜೇಷ್ಟ್ಯಮಾಸಬಹುಳಸೋಲು
5 ಬಯ್ಯಪದೇವನಮಗಂ
6 ಮಯ್ಯುದ್ದನೋಲಿಪನರಾಜ್ಯದೊಳ್
7 ಧಳಗಕೊಣರಬಸವಸೆ
8 ಟ್ಟಿಯಮಗಂಚಪ್ಪಿಸೆಟ್ಟಿವ್ರಿತ್ತಿ
9 ಗಾದಿತ್ಯಂಬಸುಣಮಾಗಂಚೊ
10 ಮೊನಿಯಂಕ್ತ ಕಾಜಗತಿಸಂದಿಮ
11 ಲ್ಲಬನ್ದುಜನಾರಾಯಂಕಾಡಲ್ವಾ
12 ಗಿಲಚಪ್ಪಿಸೆಟ್ಟಿತುಜುಗೊಳೆತುಜುವ
13 ನಿಕಿ ಸಿಸತ್ತ್ರ ಸ್ವಗ್ಗಕ್ಕೆ ಸಗ್ದಂ

## 10

ಅದೇ ಸ್ಥಳಲ್ಲಿ.

ಪ್ರಮಾಣ 4'3' × 4'3"

1 ಸ್ವಸ್ತಿಅಜ್ಜನರಾಪ
2 ನಾಳಕೆಯೊಳವೆಳಂ
3 ಗಕೊವರಚಪ್ಪಿಸೆಟ್ಟಿಯ
4 ತಮ್ಮಮಣಿಯಮಸೆಟ್ಟಿ
5 ತುಜುಗೊಳೆತುಜುವನಿ
6 ಕ್ಕಿಸಿಸತ್ತು ಸಗ್ಗಕ್ಕೆ ಸನ್ದಂ

## 11

ಅದೇ ಹೋಬಳಿ ಹುಲ್ಲುಕಡಿ ಬೆಟ್ಟಕ್ಕೆ ಪೂರ್ವ ಮುಕ್ಕಣ್ಣೇಶ್ವರದೇವಾಲಕ್ಕೆ ವಾಯುವ್ಯದಲ್ಲಿ ಹುಟ್ಟು ಗುಂಡಿನ ಮೇಲೆ.

ಗ್ರಂಥ ಮತ್ತು ಅರವಕ್ಷರ.

ಪ್ರಮಾಣ 3' × 4' 8"

## 12

ತೂಬಗೆರೇ ಹೋಬಳಿ ತೂಬಗೆರೆ ಗ್ರಾಮದಲ್ಲಿ ವೆಂಕಟರಮಣ ದೇವಾಲಯಕ್ಕೆ ಈಶಾನ್ಯದ ಬೈಲಿನಲ್ಲಿ.

ಪ್ರಮಾಣ 2'6" × 1'2"

1 ಸಿಂನದಲುಣಮಬೈಸ್ಥಲಕ್ಕನಾಯ್ಕ
2 ಸಿಂಗಿನಾಯಕತೂಬಗೆ
3 ರೆಕ್ಸಜಗಲುಡಿಕೆಖಿದಮ
4 ತಂನುನಿನಗೆಮೊಕರರಮಾಡ್ಸಿ
5 ಯಿರುವದ್ದರಿಂದಾನಿನ್ನಗುಜ
6 ರಾನುಬಗ್ಯೆಯಿಮಾಗ್ರಾಮದಲ್ಲಿಯಿನಾ
7 ಮತಿಮಾಸ್ಯೆಲನಅಮಾನಮಾ
8 ತ್ರಪಕ್ಕಪದ್ದಲುಹೊಲಗ್ರಾಮ
9 ......ಕೆಂಪುಭೂಮಿಪೂ

(ಇದರ ಕೆಳಭಾಗದ ಕಲ್ಲು ಹೋಗಿದೆ.)

ಹಿಂಭಾಗದಲ್ಲಿ

. . . . . . . . . .

[1]ರಕಾರದಹುಕುಂನಾಮ

[2]ಪ್ರಕಾರಕ್ಕೆಆವಿಾಲನರ

[3]ಜಾತಲಬಿನಲ್ಲಿಯಿದ್ದುಕೊ

[4]ಂಡುಸರಕಾರದಅಹಂ

[5]ಮದಿದವಲತ್ತಿಗೆಶ್ರೀಯಸ್ಸು

[6]ಅಪೇಕ್ಷಿಸಿಕೊಂಡುಸುಖ

[7]ದಲ್ಲಿಯಿರೋದುತಾರೀಕು

(ಮುಂದೆ ಹೋಗಿದೆ.)

## 13

ಅದೇ ಗ್ರಾಮಕ್ಕೆ ಪಶ್ಚಿಮ ಹಳೇ ಕೋಟೆಗೆ ದಕ್ಷಿಣ ಆಂಜನೇಯಸ್ವಾಮಿಯ ಮಾನ್ಯದ ಹೊಲದಲ್ಲಿ ಬಾಡೇಮೇಲೆ.

ಪ್ರಮಾಣ 2′×0′6″

[1]ರಾಕ್ಷಸಸಂಆಷಾಡಶು ೧ ಲು

[2]ದಾಸೆನಾಯಕರಿಗೆಪುಣ್ಯವಾಗಬೇಕೆಂದುತೂ

[3]ಬರೆಯತಿರುಮಲದೇವರಿಗೆನಂ

[4]ದಾದೀಪಕ್ಕೆತಿಂಮಪನುಕೊಟ್ಟಹೊ

[5]ಲ

## 14

ಅದೇ ಹೋಬಳಿ ಹಾಡೋನಹಳ್ಳಿಯ ಮಲ್ಲಮ್ಮನ ಹೊಲದಲ್ಲಿ.

ಪ್ರಮಾಣ 4′ 3″×2′ 4″

[1]ಸ್ವಸ್ತಿಶ್ರೀಮತುಸಕವರುಷಂಗ

[2]ಳ ೧೦೫೦ನೆಯವಿಭವಸಂವತ್ಸರ

[3]ದಸ್ರಾವಣಬ ೧೦ ಬುಸ್ವಸ್ತಿಶ್ರೀಮತುಪ್ರತಾ

[4]ಪಚಕ್ರವರ್ತಿಹೊಯಿಸಳಶ್ರೀವೀರ

[5]ಬಲ್ಲಾಳದೇವರ್ಸರುವ್ರುಣಮಲೆಪಟ್ಟ

[6]ಣದಲ್ಲಿಸುಖಸಂಕಥಾವಿನೋದದಿಂ

[7]ರಾಜ್ಯಂಗಯಿಸುತ್ತುಂಶ್ರೀಮನುಮಹಾ

[8]ಪ್ರಧಾನಂಪ್ರಣನವರಮಕ್ಕಳು

[9]ಶ್ರೀಮೆಯದಂಣಾಯಕರ್ಎಲ

[10]ಹಂಕನಾಡಮಲದಿಪನಪುರ . .

[11]ಯಚಣಗಹಡುವನಹಳ್ಳಿಯ

[12]ಚತುಸ್ಸೀಮೆಯನೂಚಂದ್ರಆದಿತ್ಯ

[13]ತಾರಂ(ನೆ)ಬರಂಕೊಡಿಸಿದಂ

## 15

ಅದೇ ಗ್ರಾಮದಲ್ಲಿ ಚನ್ನಕೇಶವ ದೇವಸ್ಥಾನದ ಮೆಟ್ಲಿನ ಬಲಭಾಗದ ಗೋಡೆಯಲ್ಲಿ.

ಪ್ರಮಾಣ 2′ 6″×2′

[1] . . . . ೧೪೪೯ ನೆಯಸರ್ವಜಿ

[2]ತಸಂವತ್ಸರದಾಷಾಡಸು ೧ ಮಶ್ರೀಮನು

[3]ಮಹಾರಾಜಾಧಿರಾಜರಾಜಪರಮೇಶ್ವರಶ್ರೀಕ್ರ

[4]ಷ್ಣರಾಯಮಹಾರಾಯಕಟಿಸಿದಕಾಡಕೆಸವಕರಾಜ

[5]ನಾಯ

(ಮುಂದೆ ೫ ಪಂಕ್ತಿಗಳು ಕಾಣುವದಿಲ್ಲ)

## 16

ಆದೇ ಗ್ರಾಮಕ್ಕೆ ಉತ್ತರದಲ್ಲಿ ಹನುಮಂತಗರುಡ ಕಂಭದ ಬುಡದಲ್ಲಿ.

ಪ್ರಮಾಣ 3′ 4″ × 2′ 6″

1 ಸ್ವಸ್ತಿಶ್ರೀಮತುಶಕವರುಷ
2 ೧೨೭೮ ನೆಯದುರ್ಮುಖಿಸಂವತ್ಸ
3 ರದಚಯಿತ್ರಶು ೧ ಗುಶ್ರೀಮನ್ಮಹಾವ
4 . . . . ಜಾಧಿರಾಜರಾಜಪರ
5 ಮೇಶ್ವರಅಶ್ವಪತಿಗಜಪತಿನರಪ
6 ತಿಮುವರುರಾಯರಗಂಡಪ್ರತಾಪ
7 ಶ್ರೀವೀರಹರಿಹರರಾಯರಕುಮಾರ .
8 . ರಾಯವೊಡೆಯತ್ರಿಭುವನಚಕ್ರವರ್ತಿ
9 ಗಲು . . ಪಿರಿಯುಮಗಟುಬಂಗಿರಿಯುಮಿ
10 ದಿಯುಮಾಡಿದತಿರುಮಲದೀಪಕಂಬಕೆಮಂಗಳಮಹಾ

## 17

ಆದೇ ಹೋಬಳಿ ಸೋತೇನಹಳ್ಳಿ ಗ್ರಾಮಕ್ಕೆ ಉತ್ತರ ಪಟೇಲ ಶಿಂಗರಿಗೌಡನ ಗುಡೀ ಹೊಲದ ಬಳಿ.

ಪ್ರಮಾಣ 3′ 2″ × 1′ 3″

1 ಪಾರ್ತಿವಸಂವತ್ಸ
2 ದಶ್ರಾವಣಶು ೫
3 ಯಲುಯಿಬ್ರಾಂ
4 ಖಾನಜಕಬಕಾ
5 ನಸಾಹೇಬರವರು
6 . ರಗಲುಡ
7 ಟಾಸಯುಗೆ
8 ಕೊಟಕಾಂ
9 ಮಾಜೆಗಳು
10 ಡನನೆತರ
11 ಕೊಡಗೆ
12 ಮಾನ್ಯ

## 18

ಆದೇ ಹೋಬಳಿ ಕುರಿವಿಗೆರೆಗೆ ಪೂರ್ವದಲ್ಲಿ ಪಿಳ್ಳೇಗೌಡನ ಹೊಲದಲ್ಲಿ.

ಪ್ರಮಾಣ 5′ 3″ × 2′ 10″

1 ಸ್ವಸ್ತಿಶ್ರೀಮತುಸಕವ
2 ರುಷ ೧೬೫೦ ನೇ ವಿಭವಸಂವತ್ಸರ
3 ಶ್ರಾವಣಸು ೧೫ ಶುವಾರದಂದು
4 . . . . ಪ್ರತಾಪಚಕ್ರವರ್ತಿಹೊಯ್
5 ಸಳಶ್ರೀವೀರಬಲ್ಲಾಳದೇವರ್ಸರು
6 ವೃಂಣಾಮಲೆಪಟ್ಟಣದಲ್ಲಿಸುಖ
7 ಸಂಕಥಾವಿನೋದದಿಂರಾಜ್ಯ
8 ಂಗಯುತ್ತಂಶ್ರೀಮನುಮಹಾ
9 ಪ್ರಧಾನಂಪೊಂನಣನವರಮ
10 ಕ್ಕಳುಕಾಮದಂಸಾಯಕರುಎಲ
11 ಂಕನಾಡವಿ . .
12 ಡಗಾಂಡಂಗೆಕಟುವಗೆಜಿ
13 ಚತುಸ್ಸೀಮೆಯನು . .
14 . . . . ಚಂದ್ರಾದಿತ್ಯ
15 . . . . ಂನಪಿರಕಿವಿಟ್ಟಕೊಟ್ಟ

## 19

ಅದೇ ಹೋಬಳಿ ಕಂಚಿಗನಾಳು ಗ್ರಾಮಕ್ಕೆ ದಕ್ಷಿಣ ಶಿವಾಚಾರದ ರುದ್ರನ ತೋಟದಲ್ಲಿ.

ಪ್ರಮಾಣ 4′ 9″×2′ 9″

[1]ಸ್ವಸ್ತಿಶ್ರೀವಿಜಯಾಭ್ಯುದಯಶಾಲಿವಾಹನ
[2]ಶಖವರುಷ . . . ಪ್ರಮತಿಸಂವಛರದಮಾ
[3]ಗ್ಗಶಿರಶು ೧೨ . . ಶ್ರೀಮದ್ರಾಜಾಧಿರಾಜರಾಜ
[4]ಪರಮೇಶ್ವರ . . . . ಕೃಷ್ಣರಾಯಮ
[5]ಹಾರಾಯರು . . ಪ್ರಿಥ್ವೀರಾಜ್ಯಂಗೆಉತ್ತಿರಲುಭಾ
[6]ರದ್ವಾಜಗೋತ್ರದಆಪಸ್ತಂಬಸೂತ್ರಾಯರಾಮಾಭ
[7]ಟ್ಟಪುರಾಣೀಕ . . . ಗಾಂಡಿಯಗೋತ್ರದಯಜಾ
[8]ಜಯ . . . . . ಪಂಡಿತ
. . . . . . .
[11] . . . ನಸಮುದ್ರ . .
[12] . . . ಕಂಚಿಗಣಹಾಲುಗ್ರಾಮ
[13]ಪ್ರತಿನಾಮಸಿಂಗಸಮುದ್ರಅಗ್ರಹಾರಕ್ಕೆ
[14]ಆಗ್ರಾಮವನು ನಿಮಗೆಮಂಚಿಟನಾಯಕರ
(ಹಿಂಭಾಗದಲ್ಲಿ ೪ ಪಙ್ತಿಗಳು ಕಾಣುವದಿಲ್ಲ)

## 20

ಅದೇ ಹೋಬಳಿ ತಿಪ್ಪೇನಹಳ್ಳಿ ದಾಖಲೆ ತಿಮ್ಮೋಜನಹಳ್ಳಿಗೆ ಪಶ್ಚಿಮದಲ್ಲಿರುವ ವೀರಕಲ್ಲು.

[1]ಯ್ಯತವರು | [2] . . . . . . | [3]ಕೊಟ್ಟಲ | [4]ಕೊನಾಯ | [5]ಪುಲಿ | [6]ಟಿಳ

## 21

ಅದೇ ಸ್ಥಳದಲ್ಲಿ.

[1]ಸ್ವಸ್ತಿಬೆ
[2]ಣ್ಣೆಗೂರವಸ್ಯಾ
[3]ರಮುಮಗಂ
[4]ಎಱಾಯ
[5]ಗಯ್ಯ
[6]ತನ್ನಪೂ
[7]ತ್ರಮಾರನ
[8]ವಕೊಣ
[9]ವಿ
[10]ಪ . ಗ
[11]. .
[12]ದೊಳ
[13]ಕಾದಿದ

## 22

ರಾಜಗಟ್ಟದ ಹೋಬಳಿ ರಾಜಗಟ್ಟದ ಕೆರೇಯೇರಿಗೆ ಪೂರ್ವದಲ್ಲಿರುವ ವೀರಕಲ್ಲು.

[1]ಶ್ರೀಸಿಂಸಟ್ಟಯ | [2]ಂಬಸವಸಿ | [3]ಟ್ಟಾಮರಜವದಿ | [4]ಯೊಳಗೆಬೀಱನಿಱಿಯಸತ್ತ

## 23

ಅದೇ ಸ್ಥಳದಲ್ಲಿ.

1 ಶ್ರೀನಕರಣ
2 ಬೇಳರತೋ
3 ಟಮಸೆಟ್ಟಿ
4 ಬಾಡಣದಲೂ
5 ರಟಿನೊಳ್
6 ಸತ್ತ
7 ಣಿಗ . .
8 ಚಕ್ರವರ್ತಿಅ
9 ನಮೊ

## 24

ಅದೇ ಗ್ರಾಮದ ಮೂರುಬಾಗಲ ಬಲಗಡೆ ಕಂಭದಲ್ಲಿ.

1 ಪಂಚಾಂಗಅಪಾಭಟಾ

## 25

ಅದೇ ಸ್ಥಳದ ಯಡಗಡೆ ಕಂಭದಲ್ಲಿ

1 ರಾಜಗಟದ ತಳವಾರಗೀಗಾ

## 26

ಅದೇ ಗ್ರಾಮದ ಬಿದಲೂರು ನಂಜಕ್ಕನ ಹೊಲದಲ್ಲಿ.

1 ಶುಭಮಸ್ತು ವಿಜಯಾಭ್ಯುದಯ
2 ಖರಸಂವತ್ಸರದಫಾಲ್ಗುಣಬ
3 ದಳವಾಯಿಸಿಂಗರಿನಾಯುಕ
4 . . ಕರೆಯುಯಿದೆಯ . . ಮಂಸಸೀತಾಂಶುಃ
5 ರಾಜಗಟ್ಟದನಡರ , . . .
6 ಯಾಮಲಂತೆ . .
7 ಸಾವಿರರಾಜಗಟ್ಟ . . .
8 ವರುಷವೆಭವತಿಥಿ . .ಯಲಾಗಿ . .
9 ಯಾದೇಸಿಗನನಾಡಿಗಿನ
10 ದಿಂದರಾಜಗಟ್ಟದ

## 27

ಅದೇ ಹೋಬಳಿ ಮಲೆಕೋಟೆಯ ಕೆರೇಕೋಡಿಯಲ್ಲಿ ತುಂಡು ಕಲ್ಲುಗಳು.

ಗ್ರಂಥ ಮತ್ತು ಅರವಕ್ಷರ.

## 28

ಅದೇ ಹೋಬಳಿ ಹಂಚರಹಳ್ಳಿಗೆ ದಕ್ಷಿಣ ಮಠದ ಅಯ್ಯನ ಹೊಲದಲ್ಲಿ.

ಪ್ರಮಾಣ 5′ × 2″

[1] ಶ್ರೀಮತುವ್ಯ
[2] ಯುಸಂವತ್ಸರದ
[3] ದಫಾಲ್ಗುಣಶುದ ೭ ಮು
[4] ಉಸಜಿಮುತದಜನರಮು
[5] ಸಂಬುಜಿರಾಯನುಚನ್ನ
[6] ಬಸಅಪವಡೇರಿಗೆಕೊ
[7] ಟಹಚಿಪುರಯಿದಕೆ
[8] ಯಾವದೊರೆತಪಿದರು
[9] ಯಿಹಪರವಿಲ್ಲಮೋಕ್ಷಲ್ಲ . .

## 29

ಅದೇ ಹೋಬಳಿ ನಂದಿಗುಂದಕ್ಕೆ ಪೂರ್ವದಲ್ಲಿ ತಂಮಣ್ಣನ ಹೊಲದಲ್ಲಿ.

ಪ್ರಮಾಣ 3′ × 2″

[1] ಸ್ವಸ್ತಿಶ್ರೀಸಕವರುಷ ೧೩
[2] ೯೩ ನೆಯ
. . . . . . .
[8] ಹಕ್ಕನಾಡಹಿರಿಯ
[9] ಬಯಿರೇಗೌಡನಮಗಮಂಚೆ
[10] ಗೌಂಡರಿಗೆನಂದಿಗುಂದದ
[11] ಚತುಸ್ಸೀಮೆಯ
. . . . .

## 30

ಅದೇ ಹೋಬಳಿ ಕೊಣಗಟ್ಟದಲ್ಲಿ ಲಕ್ಷ್ಮೀನರಸಿಂಹ ಶಾಸ್ತ್ರಿ ವಶದಲ್ಲಿದ್ದ ತಾಮ್ರ ಶಾಸನ.

ನಾಗರಾಕ್ಷರ—೩ ಪತ್ರಗಳು—ವರಾಹಮುದ್ರೆ

೧ನೇ ಪತ್ರದ ಹಿಂಭಾಗ

[1] ಶ್ರೀಗಣಾಧಿಪತಯೇನಮಃ ॥ ನಮಸ್ತುಂಗಸಿರಶ್ಚುಂಬಿಚಂ
[2] ದ್ರಚಾಮರಚಾರವೇ । ತ್ರೈಲೋಕ್ಯನಗರಾರಂಭಮೂಲಸ್ತಂಭಾಯಸಂಭವೇ ॥

[3]ಹರೇರ್ಲೀಲಾವರಾಹಸ್ಯದಂಷ್ಟ್ರಾದಂಡಃ ಸಪಾತುವಃ । ಹೇಮಾದ್ರಿಕಲಶಾ
[4]ಯತ್ರಧಾತ್ರೀಚ್ಛತ್ರಶ್ರಿಯಂದಧೌ । ಕಲ್ಯಾಣಾಯಾಸ್ತುತದ್ಧಾಮಪ್ರತ್ಯೂಹತಿಮಿ
[5]ರಾಪಹಂ । ಯದ್ಗಜೋಪ್ಯಗಜೋದ್ಭೂತಂಹರಿಣಾಪಿಚಪೂಜ್ಯತೇ । ಅಸ್ತಿಕ್ಷೀರಮಯಾ
[6]ದ್ದೇವೈರ್ಮಥ್ಯಮಾನಾನ್ಮಹಾಂಬುಧೇಃ । ನವನೀತಮಿವೋದ್ಭೂತಮಪನೀತತಮೋಮಹ
[7]ಃತಸ್ಯಾಸೀತ್ತನಯಸ್ತಪೋಭಿರತುಳೈರನ್ವರ್ಥನಾಮಾಬುಧಃಪುಣ್ಯೈರಸ್ಯಪುರೂರ
[8]ವಾಭುಜಬಲೈರಾಯುರ್ದ್ವಿಷಾಂನಿಘ್ನತಃ । ತಸ್ಯಾಯುರ್ನಹುಷೋಥತಸ್ಯಪರುಷೋಜ
[9]ಜ್ಞೇಯಯಾತಿಃಕ್ಷಿತೌಖ್ಯಾತಸ್ತಸ್ಯತುತುರ್ವಸುರ್ವಸುನಿಭಃಶ್ರೀದೇವಯಾನೀಪತೇಃ ।
[10]ತದ್ವಂಶೇದೇವಕೀಸೂನುರ್ದಿದೀಪೇತಿಂಮ್ಮಭೂಪತಿಃ । ಯಃಶ್ವೇತಉಳುವೇಂದ್ರೇಷುಯದೋಃಕೃ
[11]ಷ್ಣಇವಾನ್ವಯೇ । ತತೋಭೂದ್ಬುಕ್ಕಮಾಜಾನಿರೀಶ್ವರಕ್ಷಿತಿಪಾಲಕಃ । ಅತ್ರಾಸವಾಗುಣೋತ್ತಂ
[12]ಸಃಮೌಳಿರತ್ನಂಮಹೀಭುಜಾಂ । ಸರಸೀರುಹಭೂಃಸ್ಮಾನರಸಾವನಿಪಾಲಕಃ । ದೇವಕೀ
[13]ನಂದನಾತ್ಕಾಮೋದೇವಕೀನಂದನಾದಿವ ॥ ವಿವಿಧಸುಕೃತೋದ್ದಾಮೇರಾಮೇಶ್ವರಪ್ರಮುಖೇ
[14]ಮುಹುರ್ಮುದಿತಪ್ರದಮಃಸ್ಥಾನೇಸ್ಥಾನೇವ್ಯಧತ್ತಯಥಾವಿಧಿ । ಬುಧಪರಿವೃತೋನಾ
[15]ನಾದಾನಾನಿಯೋಭುವಿಷೋಡಶತಿ)ಭುವನಜನೋದ್ಗೀತಂಕೀರ್ತಂಯಶಃಪುನರು
[16]ಕ್ತಯನ್ । ಕಾವೇರೀಮಾಶುಬದ್ಧ್ವಾಬಹಳಜಲಯುತಾಂಯೋವಿಲಂಘ್ಯೈವಶತ್ರುಂಜೀ
[17]ವಗ್ರಾಹಂಗೃಹೀತ್ವಾಸಮಿತಿಭುಜಬಲಾತ್ತಂಚರಾಜ್ಯಂತದೀಯಂ ॥ ಕೃತ್ವಾಶ್ರೀರಂಗ
[18]ಪೂರ್ವಂತದಪಿನಿಜವಶೇಪಟ್ಟಣಂಯೋಬಭಾಸೇಕೀರ್ತಿಸ್ತಂಭಂನಿಖಾಯತ್ರಿಭು
[19]ವನಮಪುಷಸ್ತಾಯಮಾನಾಪದಾನಃ । ಚೇರಂಚೋಳಂಚಪಾಂಡ್ಯಂತದಪಿಚಮಧುರಾ
[20]ವಲ್ಲಭಂಮಾನಭೂಷಂವೀರ್ಯೋದಗ್ರಂತುರುಷ್ಕಂಗಜಪತಿನೃಪತಿಂಚಾಪಿಜಿತ್ವಾ
[21]ತದನ್ಯಾನ್ । ಆಗಂಗಾತೀರಲಂಕಾಪ್ರಥಮಚರಮಭೂಭೃತ್ತಟಾಂತಂನಿತಾಂ
[22]ತಂಖ್ಯಾತಃಕ್ಷೋಣೀಪತೀನಾಂಸ್ರಜಮಿವಶಿರಸಾಂಶಾಸನಂಯೋವ್ಯತಾನೀತ್ ।
[23]ತಿಪ್ಪಾಜೀನಾಗಲಾದೇವ್ಯೋಃಕೌಸಲ್ಯಾಶ್ರೀಸುಮಿತ್ರಯೋಃ । ದೇವ್ಯೋರಿವನೃಸಿಂಹೇಶಾ
[24]ತ್ತಸ್ಮಾತ್ಪಙ್ಕ್ತಿರಥಾದಿವ । ವೀತಾವಿನಯಿನೌರಾಮಲಕ್ಷ್ಮಣಾವಿವನಂದನೌ ।
[25]ಜಾತೌವೀರನೃಸಿಂಹೇಂದ್ರಕೃಷ್ಣರಾಯಮಹೀಪತೀ । ವೀರಃಶ್ರೀನಾರಸಿಂಹಃಸವಿಜ
[26]ಯನಗರೇರತ್ನಸಿಂಹಾಸನಸ್ಥಃಕೀರ್ತ್ಯಾನೀತ್ಯಾನಿರಸ್ಯಂನೃಗನಳನಹು
[27]ಷಾನಧ್ಯವಸ್ಯಾಮಥಾನ್ಯಾನ್ । ಆಸೇತೋರಾಸುಮೇರೋರವನಿಸುರನುತಃಸ್ವೈರಮಾ
[28]ಚೋದಯಾದ್ರೇರಾಪಾಶ್ಚಾತ್ಯಾಚಲಾಂತಾದಖಿಳಹೃದಯಮಾವರ್ಜ್ಯರಾಜ್ಯಂಪ್ರಶಾ
[29]ಸ । ನಾನಾದಾನಾನ್ಯಕಾರ್ಷೀತ್ಕನಕಸದಸಿಯಃಶ್ರೀವಿರೂಪಾಕ್ಷದೇವ

೨ನೇ ಪತ್ರದ ಮುಂಭಾಗ

[30]ಸ್ಥಾನೇಶ್ರೀಕಾಳಹಸ್ತೀಶಿತುರಪಿನಗರೇವೇಂಕಟಾದ್ರೌಚಕಾಂ ।
[31]ಚ್ಯಾಂ । ಶ್ರೀಶೈಲೇಶೋಣಶೈಲೇಮಹತಿಹರಿಹರೇಹೋಬಲೇಸಂಗಮೇಚಶ್ರೀರಂ
[32]ಗೇಕುಂಭಘೋಣೇಹತತಮಸಿಮಹಾನಂದಿತೀರ್ಥೇನಿವೃತ್ತೌ । ಗೋಕರ್ಣೇರಾಮ
[33]ಸೇತೌಜಗತಿತದಿತರೇಷ್ವಪ್ಯಶೇಷೇಷುಪುಣ್ಯಸ್ಥಾನೇಷ್ವಾರಬ್ಧನಾನಾವಿಧಬಹ
[34]ಳಮಹಾದಾನವಾರಿಪ್ರವಾಹೈಃ । ಯಸ್ಯೋದಂಚತುರಂಗಪ್ರಕರಖುರರಜಃಶುಷ್ಯದಂ
[35]ಭೋಧಿಮಗ್ನಕ್ಷ್ಮಾಭೃಚ್ಛಪಕ್ಷಚ್ಛಿದೋದ್ಯತ್ತರುಕುಲಿಶಧರೋತ್ತರಿತಾಕುಂಠಿತಾಭೂ
[36]ತ್ । ಬ್ರಹ್ಮಾಂಡಂವಿಶ್ವಚಕ್ರಂಘಟಮುದಿತಮಹಾಭೂತಕಂರತ್ನಧೇನುಂಸಪ್ತಾಂಭೋಧಿ

[37]ಲಚಕಲ್ಪಕ್ಷಿತಿರುಹಲತಿಕೇಕಾಂಚನೀಂಕಾಮಧೇನುಂ । ಸ್ವರ್ಣಕ್ಷ್ಮಾಂಯೋಹಿರಣ್ಯಾಶ್ವ

[38]ರಥಮಪಿತುಲಾಪೂರುಷಂಗೋಸಹಸ್ರಂಹೇಮಾಶ್ವಂಹೇಮಗರ್ಭಂಕನಕಕರಿರಥಂಪಂ

[39]ಚಲಾಂಗಲ್ಯತಾನೀತ್ । ಪ್ರಾಜ್ಯಂಪ್ರಶಾಸ್ಯನಿರ್ವಿಘ್ನಂರಾಜ್ಯಂದ್ಯಾಮಿವಶಾಸಿತುಂ । ತ

[40]ಸ್ಮಿನ್ಸ್ವರ್ಗೇನವಿವಿಕ್ಷ್ಯತೇಕ್ಷಿತೇರಿಂದ್ರೇದಿವಂಗತೇ । ತತೋಽಸ್ಯವಾರ್ಯವೀರ್ಯಃಶ್ರೀಕೃಷ್ಣರಾಯಮ

[41]ಹೀಪತಿಃಬಿಭರ್ತಿಮಣಿಕೇಯೂರನಿರ್ವಿಶೇಷಂಮಹೀಂಭುಜೇ । ಕೀರ್ತ್ಯಾಯಸ್ಯಸಮಂತತಃ

[42]ಪ್ರಸೃತಯಾವಿಶ್ವಂಸುಜ್ಯೈಕ್ಯಂವ್ರಜೇದಿತ್ಯಾಶಂಕ್ಯಪುರಾಪುರಾಪುರಾರಿನುಭವತ್ಫಾಲೇಕ್ಷಣ

[43]ಪ್ರಾಯಾಸಃ । ಯಸ್ಮಾತ್ಕ್ಷೋಣಿಪಚತುರ್ಭುಜೋನಿಜಚತುರ್ವರ್ಗಕ್ರಿಯಾನಪ್ರತ್ಮಭೂಃಕಾಲೇಖಡ್ಗಮದಾದ್ರ

[44]ಮಾಚಕಮಲಂವೀಣಾಂಚವಾಣೀಕರೇ । ಶತ್ರೂಣಾಂವಾಸವೇತೇಸಗತಇತಿರುಷ್ಟಃಕಿಂನುಸ

[45]ಪ್ತಾಂಬುರಾಶಿಂನಾನಾಸೇನಾತುರಂಗತ್ರುಟಿತವಸುಮತೀಧೂಳಿಜಾಲಾವಳಿಕಾಭಿಃ । ಸಂಶೋ

[46]ಷ್ಯಸ್ವೈರಮತ್ರಪ್ರತಿನಿಧಿಜಲಧಿಶ್ರೇಣಿಕಾಯೋವಿಧತ್ತೇಬ್ರಹ್ಮಾಂಡಸ್ವರ್ಣಮೇರು

[47]ಪ್ರಮುಖನಿಜಮಹಾದಾನತೋಯೈರಮೇಯೈಃ ॥ ಮುದ್ದತ್ತಾಮರ್ಥಿಸಾರ್ಥಶ್ರಿಯಮಪಿಹಸನ್ಚಿರಂ

[48]ಭುಂಜತಾಮಿತ್ಯನೇತ್ಯಪ್ರಾಯಃಪ್ರತ್ಯೂಹಹೇತೋರಸ್ತಪನರಥಗತೇರಾಲಯಾಂದೇವತಾನಾಂ । ತತ್ತ

[49]ದ್ದಿಗ್ಜೈತ್ರಪತ್ರ್ಯಪಿಚಬಿರುದಪದರಂಕಿತಾಃಸ್ತತ್ರತತ್ರಸ್ತಂಭಾಂಜಾತಪ್ರತಿಷ್ಠಾನತ

[50]ನುತಭುವಿಯೋಭೂಭೃದಭ್ರಂಕಷಾಗ್ರಾನ್ । ಕಾಂಚೀಶ್ರೀಶೈಲಶೋಣಾಚಲಕನಕಸಭಾವೇಂ

[51]ಕಟಾದ್ರಿಪ್ರಮುಖ್ಯೇಷ್ವಾವೃತ್ತ್ಯಾವೃತ್ತ್ಯಸರ್ವೇಷ್ವತನುತವಿಧಿವದ್ಭೂಯಸೇಶ್ರೇಯಸೇಯಃ । ದೇ

[52]ವಸ್ಥಾನೇಷುತೀರ್ಥೇಷ್ವಪಿಕನಕತುಲಾಪೂರುಷಾದೀನಿನಾನಾದಾನಾನ್ಯೇವೋಪದಾ

[53]ನ್ಯೇಪಿಸಮಮಖಿಳೈರಾಗಮೋಕ್ತಾನಿತಾನಿ । ದೋಷಕೃತಪ್ರತಿಪಾರ್ಥಿವದಂಡಃ

[54]ಶೇಷಭುಜಕ್ಷಿತಿರಕ್ಷಣಶೌಂಡಃ । ಭಾಷೆಗೆತಪ್ಪುವರಾಯರಗಂಡಸ್ತೋಷಕೃದರ್ಥಿಷುಯೋರ

[55]ಣಚಂಡಃ । ರಾಜಾಧಿರಾಜಇತ್ಯುಕ್ತೋಯೋರಾಜಪರಮೇಶ್ವರಃ । ಮೂರರಾಯರಗಂಡಶ್ಚಪರ

[56]ರಾಯಭಯಂಕರಃ । ಹಿಂದೂರಾಯಸುರತ್ರಾಣೋದುಷ್ಟಶಾರ್ದೂಲಮರ್ದನಃ । ಗಜ[illegible]ಗಂಡಭೇರುಂಡ

[57]ಇತ್ಯಾದಿಬಿರುದಾನ್ವಿತಃ । ಆಲೋಕಯಮಹಾರಾಜಜಯಜೀವೇತಿವಾದಿಭಿಃ । ಅಂಗವಂಗ

[58]ಕಳಿಂಗಾದ್ಯೈರ್ರಾಜಭಿಃಸೇವ್ಯತೇಚಯಃ ॥ ಸ್ತುತ್ಯೌದಾರ್ಯಃಸಧೀಭಿಃಸವಿಜಯನಗರೇ

[59]ರತ್ನಸಿಂಹಾಸನಸ್ಥಃಕ್ಷ್ಮಾಪಾಲಾನ್ಕೃಷ್ಣರಾಯಕ್ಷಿತಿಪತಿರಧರೀಕೃತ್ಯಕೀರ್ತ್ಯಾನೃ

[60]ಗಾದೀನ್ । ಅಪೂರ್ವಾದ್ರೇರಥಾಸ್ತಕ್ಷಿತಿಧರಕಟಕಾದಾಚಹೇಮಾಚಲಾಂತಾದಾಸೇತೋರರ್ಥಿಸಾ

[61]ರ್ಥಶ್ರೀಯಮಿಹಬಹುಶೋಕೃತ್ಯಕೀರ್ತ್ಯಾಬಭಾಸೇ । ಕೃತವತಿಸುರಲೋಕೇಕೃಷ್ಣರಾಯೇನಿ

[62]ಜಾಜ್ಞಾಂತವನುತದನುಜನ್ಮಾಪುಣ್ಯಕವರ್ಯಾಚ್ಯುತೇಂದ್ರಃ । ಪ್ರಕಟಮವನಿಲೋಕಂಸ್ವಾಂಶ

೨ನೇ ಪತ್ರದ ಹಿಂಭಾಗ

[63]ಮೇತ್ಯಾಜೇತಾನಿವಸತುಹೃದಿಜೇತಾವಿದ್ವದಿಷ್ಟಪ್ರದಾತಾ ॥ ಯ

[64]ತ್ಕೀರ್ತಿಶ್ಚಂದ್ರಶ್ಚರತಿಕ್ಷಪಾಯಾಂತಿಥಿಷ್ವಶೇಷಾಸುವಿವರ್ಧತೇಚ । ತ

[65]ನೋತಿಚಕ್ರಸ್ಯಮುದಂಸಮಿಂಧೇದಿವಾಚಸಾಯಂಕುಮುದ್ವೈರಿರಂಧ್ರೇ । ಮುದಂಮನ

[66]ಸ್ವಮಾರುತಂಶಿಥಿಲಯನ್ನಮೇಯೈರಯ್ಯೈರ್ಯದಶ್ವಪಟಲೀಸಾಧ್ಯೈಃಕ್ಷಿತಿರಜೋಭಿರುತ್ಥ

[67]ಪಿತೈಃ । ಅಜೀಜನದಿತಿಕೃಧಾತ್ರಿಮುವಿಶೋಷಯತ್ಯಂಬುಧಿಂಬಲಪ್ರಮಥನಸ್ಯನೋ

[68]ದಯವಿರೋಧಿನೋವಾಜಿನಃ । ಕಾರಾಗೃಹಾಕಲಿತವಾಸವಿರೋಧಿಭೂಪದಾರಾವಳೀ

[69]ಕರವಿಚಾಲಿತಚಾಮರಸ್ಯ । ರಾಜಾಧಿರಾಜಪರರಾಜಭಯಂಕರಸ್ಯಶ್ರೀವೀರಾದಿಕಾನಿಬಿ

[70]ರುದಾನಿಬಹೂನಿಯಸ್ಯ ॥ ಗೋಕರ್ಣಸಂಗಮನಿವೃತ್ತಿಸುವರ್ಣನದ್ಯಂಶೋಣಾದ್ರಿಸರ್ವ

[71]ತವಿರಿಂಚಿಪುರೇಷುಕಾಂಚ್ಯಾಂ । ಶ್ರೀಕಾಳಹಸ್ತಿನಗರೇಪಿಚಕುಂಭಘೋಣೇದಾನಾನಿ

[72]ಷೋಡಶಬಹೂನಿಕೃತಾನಿಯೇನ । ಅಂಭೋಧೇನನಿಪೀಯ್ಯಮಾನಸಲಿಲೋಗಸ್ತ್ಯೇನ

[73]ಪಿತ್ರೋಝಿತಸ್ತೃಪ್ತೋರಾಘವಸಾಯಕಾಗ್ನಿಶಿಖಯಾಸಂತಪ್ಯಮಾನಸ್ಸದಾ ।

[74]ಅಂತಸ್ಥೈರ್ಬಡವಾನಲಸ್ಯಚಶಿಖಾಜಾಲೈರ್ವಿಶುಷ್ಯೋಥವಾಯದ್ದಾನಾಂಬು

[75]ರಯೈರಹರ್ನಿಶಮಹೋಪೂರ್ಣಸ್ಸಮುದ್ಯೋತತೇ । ಅಂಗೇನಾಪಿಕಳಿಂಗೇನವಂಗೇನಚ

[76]ಪರೈರ್ನೃಪೈಃ । ಜಯಜೀವಮಹಾರಾಯೇತ್ಯಸಿಕಂಗೀಯತೇಚಯಃ । ಸಜಯತಿನರಪಾ

[77]ಲೋರತ್ನಸಿಂಹಾಸನಸ್ಥೋವಿಜಯನಗರವಾಸೀಕೀರ್ತಿಪಾತ್ರ್ಯಾವಿಲಾಸೀ ।

[88]ನೃಗನಳನಹುಷಾದೀನ್ಜಯನ್ರಾಜ್ಯನೀತ್ಯಾನಿರುಪಮಭುಜವೀರ್ಯೋದಾರ್ಯಭೂರಚ್ಯು

[89]ತೇಂದ್ರಃ । ಶಾಲಿವಾಹಶಕಾಬ್ದೇಭೂಸಹಸ್ರೇಣಚತುಃಶತೈಃ । ಪಂಚಾಶತಾಚಸಂಖ್ಯಾ

[80]ತೇಪ್ಯಯಾತ್ಯಧಿಕಯಾಕ್ರಮಾತ್ । ವತ್ಸರೇವಿಕೃತಾಖ್ಯೇತುವೈಶಾಖೇಪೂರ್ಣಿಮಾತಿಥೌ ।

[81]ತುಂಗಭದ್ರಾನದೀತೀರೇವಿಠಲೇಶ್ವರಸನ್ನಿಧೌ । ಆಪಸ್ತಂಬಾಖ್ಯಸೂತ್ರಾಯಕೌಂಡಿ

[82]ನ್ಯಾಯಮಹಾತ್ಮನೇ । ಯಜುಃಶಾಖಾಧ್ಯಾಯಿನೇಚವೇದಾಂತಾಗಮವೇದಿನೇ । ರಾಮಭಟ್ಟ

[83]ತನೂಜಾಯವೇಂಕಟೇಶ್ವರಯಜ್ವನೇ । ಧರ್ಮಶೀಲಾಯಶಾಂತಾಯಸದ್ಗುಣಾಢ್ಯಾಯಧೀಮತೇ ।

[84]ಮೊರಸೇನಾಡಕೇಸಂಸ್ಥಹೊಸಕೋಟಾಖ್ಯಸೀಮಗಂ । ಸಂಸ್ಥಿತಂಪೂರ್ವದಿಗ್ಭಾಗೇತತ್ರ

[85]ಗೋಪುರಪಲ್ಲಿತಃ । ಬೀಡಿಕೇರೇನಾಮಧೇಯಾದ್ಗ್ರಾಮಾತ್ಪಶ್ಚಿಮತಃಸ್ಥಿತಂ । ಕುರಬ್ಕರೇನಾ

[86]ಮಧೇಯಾದ್ಗ್ರಾಮಾದ್ದಕ್ಷಿಣತಃಸ್ಥಿತಂ । ಮಾದಪಲ್ಯಇತಿಗ್ರಾಮಾದುತ್ತರಸ್ಯಾಂದಿಶಿಸ್ಥಿ

[87]ತಂ । ಸಾಂಬಾಪುರಂಹ್ಯಗ್ರಹಾರಂಮ್ಯಾದ್ರತಿಮ್ಮನಪಲ್ಲಿತಃ । ಉಪಗ್ರಾಮೈಸ್ತ್ರಿಭಿರ್ಯುಕ್ತಂನಾ

[88]ಮ್ನಾಕಂಚಿಗಜಾಲಕಂ । ಪ್ರತಿನಾಮ್ನಾಚ್ಯುತಮಹಾರಾಯಾಂಬುಧಿರಿತೀರಿತಂ । ಸರ್ವ

[89]ಮಾನ್ಯಂಚತುಸ್ಸೀಮಾಸಂಯುತಂಸಸ್ಯಶೋಭಿತಂ । ನಿಧಿನಿಕ್ಷೇಪಪಾಷಾಣಸಿದ್ಧಸಾ

[90]ಧ್ಯಜಲಾನ್ವಿತಂ ॥ ಅಕ್ಷೀಣ್ಯಾಗಾಮಿಸಂಯುಕ್ತಮೇಕಭೋಗ್ಯಂಸಭೂರುಹಂ । ವಾಪೀಕೂಪ

[91]ತಟಾಕಾದಿಸರಃಕಲ್ಯಾಸಮನ್ವಿತಂ । ಪುತ್ರಪೌತ್ರಾದಿಭಿರ್ಭೋಗ್ಯಂಕ್ರಮಾದಾಚಂದ್ರ

[92]ತಾರಕಂ । ದಾನಸ್ಯಾಧಮನಸ್ಯಾಪಿವಿಕ್ರಯಸ್ಯಾಪಿಚೋಚಿತಂ । ಪರೀತಃಪ್ರಯತಃ

[93]ಸ್ನಿಗ್ಧೈಃಪುರೋಹಿತಪುರೋಗಮೈಃ । ವಿವಿಧೈರ್ವಿಬುಧೈಶ್ಶೈವಪಥಿಕೈರಧಿಕೈರ್ಗಿರಾ । ಅ

[94]ಚ್ಯುತೇಂದ್ರಮಹಾರಾಯೋಮಾನನೀಯೋಮನಸ್ವಿನಾಂ । ಸಹಿರಣ್ಯಪಯೋಧಾರಾಪೂರ್ವಕಂ

[95]ದತ್ತವಾನ್ಮುದಾ । ಗ್ರಾಮಸ್ಯಯಜಮಾನಸ್ತುಪ್ರತಿಗೃಹ್ಯಾಗ್ರಹಾರಕಂ । ಚತುರ್ವಿಂಶ

೨ನೇ ಪತ್ರದ ಮುಂಭಾಗ

[96]ತಿಕಾವೃತ್ತೀನ್ಪರಿಕಲ್ಪ್ಯಮಹಾಮತಿಃ । ತಾಸುಸಂಸ್ಥಾಪ್ಯವೃತ್ತೀ

[97]ನಾಂಸ್ವಾರ್ಥಮುಷ್ಟಿಚತತ್ಪರಾಃ । ದ್ವಿಜೇಭ್ಯಶ್ಶ್ರುತಿಶಾಸ್ತ್ರಾರ್ಥಪಾರಗೇಭ್ಯಸ್ಸ

[98]ಮಾಹಿತಃ । ವೃತ್ತಿಮಂತೋವಿಲಿಖ್ಯಂತೇಗೋತ್ರಸೂತ್ರಪುರಸ್ಸರಾಃ । ಆಶ್ವಲಾಯನಸೂ

[99]ತ್ರಾಯರಥೀತರಸಗೋತ್ರಿಣೇಋಕ್ಶಾಖಾಧ್ಯಾಯಿನೇಮಲ್ಲಯಜ್ವಪುತ್ರಾಯಧೀಮತೇ । ಸೋ

[100]ಮನಾಥಾರ್ಯಕೇವೃತ್ತಿದ್ವಯಮತ್ರಮುದಾದದೌ । ಆಪಸ್ತಂಬಾಖ್ಯಸೂತ್ರಾಯಕೌಂಡಿನ್ಯಾಯಮಹಾ

[101]ತ್ಮನೇ । ಯಜುಶ್ಶಾಖಾಧ್ಯಾಯಿನೇಶ್ರೀವೇಂಕಟಾದ್ರಿಸುತಾಯಚ । ಯಜ್ಞಾವಧಾನಿನೇವೃತ್ತಿದ್ವಯ

[102]ಮತ್ರಮುದಾದದೌ । ಆಪಸ್ತಂಬಾಖ್ಯಸೂತ್ರಾಯಭಾರದ್ವಾಜಸಗೋತ್ರಿಣೇ । ಯಜುಶ್ಶಾಖಾಧ್ಯಾಯಿನೇ

[103]ಚವೇಂಕಟೇಶ್ವರಸೂನವೇ । ತಿಂರಿಮಾವಧಾನಿನೇವೃತ್ತಿದ್ವಯಮತ್ರಮುದಾದದೌ । ಆಪಸ್ತಂ

[104]ಬಾಖ್ಯಸೂತ್ರಾಯಕಾಶ್ಯಪಾಯಮಹಾತ್ಮನೇ । ಯಜುಶ್ಶಾಖಾಧಾಯಿನೇಶ್ರೀಕೃಷ್ಣಭಟ್ಟಸು

[105]ತಾಯಚ । ನೃಸಿಂಹಯಜ್ವನೇವೃತ್ತಿದ್ವಯಮತ್ರಮುದಾದದೌ ಆಪಸ್ತಂಬಾಖ್ಯಸೂತ್ರಾಯಭಾ

106 ರದ್ವಾಜಸಗೋತ್ರಿಣೇ । ಯಜುಃಶಾಖಾಧ್ಯಾಯಿನೇಶ್ರೀಕೊಂಡಿಭಟ್ಟಸುತಾಯಾಚ । ಯಜ್ವನೇರಾ
107 ಘವಾಖ್ಯಾಯಾದದಾವೃತ್ತಿದ್ವಯಂಮುದಾ । ಭಾರದ್ವಾಜಸಗೋತ್ರಾಯಮಹಾಪಸ್ತಂಬಾಖ್ಯಸೂತ್ರಿ
108 ಣೇ । ಯಜುರ್ವೇದವಿದೇಸೋಮನಾಥನಾಮ್ನಾಖ್ಯಸೂನವೇ । ಯಜ್ವನೇಹೋಬಲಾಖ್ಯಾಯವೃತ್ತಿಮೇ
109 ಕಾಂಪ್ರದತ್ತವಾನ್ । ಆಪಸ್ತಂಬಾಖ್ಯಸೂತ್ರಾಯಕಾಶ್ಯಪಾಯಮಹಾತ್ಮನೇ । ಯಜುಃಶಾಖಾ
110 ಧ್ಯಾಯಿನೇಶ್ರೀಕೊಂಡಿಭಟ್ಟಸುತಾಯಾಚ । ಯಜ್ವನೇರಾಘವೇಂದ್ರಾಯಾದದಾವೃತ್ತಿದ್ವಯಂಮುದಾ । ಆ
111 ಪಸ್ತಂಬಾಖ್ಯಸೂತ್ರಾಯಕೌಂಡಿನ್ಯಾಯಮಹಾತ್ಮನೇ । ಯಜುಃಶಾಖಾಧ್ಯಾಯಿನೇಶ್ರೀತಿ
112 ಪ್ಪಶಾಸ್ತ್ರಿಸುತಾಯಚ । ಶ್ರೀಮತ್ತಿರುಮಲಭಟ್ಟಾಯವೃತ್ತಿಮೇಕಾಂಪ್ರದತ್ತವಾನ್ । ಹ್ಯಾಶ್ವಲಾ
113 ಯನ . . ತ್ರಾಯವ.ಶಿಷ್ಠಾಯಮಹಾತ್ಮನೇ । ಐಯಂಭಟ್ಟತನೂಜಾಯದೊಡ್ಡಿಭಟ್ಟಾಯಸೂರಿಣೇ
114 ವೃತ್ತಿರೇಕಾಮುದಾದತ್ತಾಹ್ಯನ್ನದಾನರತಾಯಚ । ಆಪಸ್ತಂಬಾಖ್ಯಸೂತ್ರಾಯಶ್ರೀಹರಿತಸ
115 ಗೋತ್ರಿಣೇ । ಯಜುಃಶಾಖಾಧ್ಯಾಯಿನೇಚವೆಂಗಂಭಟ್ಟಸುತಾಯವೈ । ಶ್ರೀಮತ್ತಿರುಮಲಭ
116 ಟ್ಟಾಯವೃತ್ತಿಮೇಕಾಂಪ್ರದತ್ತವಾನ್ । ಅಸ್ಯಗ್ರಾಮಸ್ಯಸೀಮಾನ್ಯಾದಿದಿಕ್ಷುವಿದಿಕ್ಷುಚದ್ವಾ
117 ತ್ರಿಂಶತ್ಫಲಾವಾಪಮನಪ್ರತಿಮಾಂಕಿತಾಸ್ಸ್ಥಾಪಿತಾಃ । ಪ್ರಾಯತೋಬುಧಮಾಂಚಷ್ಟಂಪಾ
118 ರಯತೋವೈಭೂಭುಜಾಂಗರ್ವಂ । ಅಚ್ಯುತಪಿತಿತಾಲೋಕಮಚ್ಯುತರಾಯಸ್ಯಶಾಸನಂತ
119 ದಿದಂಅಚ್ಯುತೇಂದ್ರಮಹಾರಾಯಶಾಸನಾನ್ಮಲ್ಲಣಾತ್ಮಜಃ । ತ್ವಷ್ಟಾಶ್ರೀವೀರಣಾಚಾರ್ಯೋ
120 ವ್ಯಲಿಖತ್ತಾಮ್ರಶಾಸನಂ । ದಾನಪಾಲನಯೋರ್ಮಧ್ಯೇದಾನಾಚ್ಛ್ರೇಯೋನುಪಾಲನಂ । ದಾನಾತ್ಸ್ವ
121 ರ್ಗಮವಾಪ್ನೋತಿಪಾಲನಾದಚ್ಯುತಂಪದಂ । ಏಕೈವಭಗಿನೀಲೋಕೇಸರ್ವೇಷಾಮೇವಭೂಭುಜಾಂ
122 ನಭೋಜ್ಯಾನಕರಗ್ರಾಹ್ಯಾವಿಪ್ರದತ್ತಾವಸುಂಧರಾ । ಸಾಮಾನ್ಯೋಯಂಧರ್ಮಸೇತುರ್ನೃಪಾ
123 ಣಾಂಕಾಲೇಕಾಲೇಪಾಲನೀಯೋಭವದ್ಭಿಃ । ಸರ್ವಾನೇತಾನ್ಭಾವಿನಃಪಾರ್ಥಿವೇಂದ್ರಾನ್ಭೂಯೋ
124 ಭೂಯೋಯಾಚತೇರಾಮಚಂದ್ರಃ ॥ * ಶ್ರೀವಿರೂಪಾಕ್ಷ.

## 31

### ದೊಡ್ಡಬಳ್ಳಾಪುರದ ಕೋಟೆಯಲ್ಲಿದ್ದ ಶಾಸನ.

(ಮೇಲಭಾಗದಲ್ಲಿ ಘಂಟೆ ಅಕ್ಷರದ ಶಾಸನವಿದೆ.)

1 ಶ್ರೀನಮಸ್ತುಂಗಶಿರಸ್ತುಂಗಚಂದ್ರಚಾಮ
2 ರಚಾರವೇ । ತ್ರೈಳೋಕ್ಯನಗರಾರಂಭಮೂಲಸ್ತಂಭಾಯ
3 ಸಂಭವೇ । ಸ್ವಸ್ತಿಸಮಸ್ತಭುವನಾಶ್ರಯಂಶ್ರೀಪೃಥ್ವೀ
4 ವಲ್ಲಭಮಹಾರಾಜಾಧಿರಾಜಪರಮೇಶ್ವರಂದ್ವಾರಾವತೀಪುರವರಾ
5 ಧೀಶ್ವರಂಯಾದವಕುಲಾಂಬರದ್ಯುಮಣಿಸಮ್ಯಕ್ತ್ವಚೂಡಾಮಣಿಮ
6 ಲೆರಾಜರಾಜಮಲಪರೊಳುಗಂಡಕದನಪ್ರಚಂಡಏಕಾಂಗವೀರಅಸ
7 ಹಾಯಸೂರನಿಶ್ಶಂಕಪ್ರತಾಪಚಕ್ರವರ್ತಿಶ್ರೀವೀರಹೊಯ್ಸಳವೀರನಾರ
8 ಸಿಂಹದೇವರಸರುದೋರಸಮುದ್ರದನೆಲೆವೀಡಿನೊಳುಸುಖಸಂರಾಜ್ಯಂಗೆಯ್ಯು
9 ತ್ತಮಿರಲುಶ್ರೀಮನ್ಮಹಾಮಂಡಳೇಶ್ವರಂತ್ರಿಭುವನಮಲ್ಲನಂದಗಿ
10 ರಿನಾಥಭಂಗಿಕುಲಕಮಳವಿಕಸಿತದಿವಾಕರಸಿತಗರಗಂಡಸೆಣಸು
11 ವರಗಂಡವೈರಿವಿಷಭಸಾದರ್ಶಳಅಣ್ಣನಂಕಕಾರಿಚೆಟಿದೇವರಸರು
12 ಎಲಹಂಕದನೆಲೆವೀಡಿನೊಳುಸುಖಸಂಕಥಾವಿನೋದದಿಂರಾಜ್ಯಂಗೆಯ್ಯುತ್ತಮಿರಲು ॥
13 ಸ್ವಸ್ತಿಸಮಸ್ತಭುವನವಿಖ್ಯಾತಪಂಚಸತವೀರಶಾಸನಲಬ್ಧಾನೇಕಗು
14 ಣಗಣಾಲಂಕೃತಸತ್ಯಸೌಚಚಾರುಚರಿತ್ರನಯವಿನಯವಿಜ್ಞಾನವೀರಾ
15 ವತಾರವೀರಬಣಂಜುಸಮಯಧರ್ಮಪ್ರತಿಪಾಳಕರುಂವಿಶುದ್ಧಗುಡ್ಡಗರು
16 ಡಧ್ವಜರುಂವಿರಾಜಿತಾನೂನಸಾಹಸೋತ್ತುಂಗರುಂತ್ರೈಲಂಗ
17 ನಾವಲ್ಲಭರುಂನಿಜಭುಜವಿಜಯಲಕ್ಷ್ಮಾಲಿಂಗಿತವಿಶಾಲವಕ್ಷಸ್ಥಳ
18 ರುಂತ್ರಿಭುವನಪರಾಕ್ರಮೋನ್ನತರುಂಅಹಿಚ್ಛತ್ರಪುರವರಾಧೀಶ್ವರರುಂ
19 ಬಲದೇವ ವಾಸುದೇವಖಂಡಳಿಮೂಳಭದ್ರವಂಶೋದ್ಭವರುಂಚಲ್ಲುಂಕಿದಂಡಹ
20 ಸ್ತರುಂಕನಕಕಂಚುಳಿಕೆಕಾಮದೇವರುಂಚೇಳಾಭರಣಭೂಷಿತರುಂಚೋಳ
21 ಕುಳಾಂನ್ವಿತರುಂಚಾಳುಕ್ಯಾಂನ್ವಯರುಂಕಂ . . . . ನಕರುಮಾಡಿದಹೊ

* ಕನ್ನಡಕ್ಷರದಲ್ಲಿ.

[22]ರಂಬಂತೆತ್ತಿಸಿದರು . ಜಂಬೂದ್ವೀಪ ..... ಅ..ಾವಳಿಯುಅಯ್ಯ
[23]ಬ್ಬ ಗಸ್ವಾಮಿಗಳುಂಉಭಯನಾನಾದೇಶಿಮುಖ್ಯರಪ್ಪತ್ರೈಳೋಕ್ಯಪಟ್ಟಣಸ್ವಾ
[24]ಮಿವೀರಬಲ್ಲಾಳಸೆಟ್ಟಿಯರುಂಮರಿಯಹೊಲ್ಲಸೆಟ್ಟಿ..ಂವೊಡ
[25]ಲಪ್ಪೀತಿಸೆಟ್ಟಿಯರ-ಂಹೊಟೆಯುಂಇಂಗಿಸೆಟ್ಟಿಯರುಂಗುಡ್ಡಕಲ್ಲಿಸೆಟ್ಟಿ
[26]ಯರುಂವಾಗವೈಲಾರಸೆಟ್ಟಿಯರುಂಹೊರವಡಿಯುಮಲ್ಲಿಸೆಟ್ಟಿಯರುಂನಾ
[27]ಕಿಸೆಟ್ಟಿಯುಮಾಗಕಲ್ಲಿಸೆಟ್ಟಿಯರುಂಚಿಕ್ಕತವ್ಮ . . . .
[28]ಚಿಕ್ಕಗೌಡನುಂಸಮಸ್ತಉಭಯನಾನಾದೇಸಿಗಳರುಂಇಖರಮುಂಮೂರಿದಂ
[29]ಡಮುಂ ೧೪ ಸಮಯದವರೆಲ್ಲರುಂಕೂಡಿಕಂಡುಷ ೧೧೪೯ತ್ತನೆಯ
[30]ಪ್ರಭವಸಂವತ್ಸರದಚೈತ್ರಶುದ್ಧ ೧೦ ಬ್ರಿ ॥ ಶ್ರೀಗವಮೇಶ್ವರದೇವರಶ್ರೀ
[31]ಕಾರ್ಯ್ಯಕ್ಕಂಅಂಗರಂಗಭೋಗಕಂಪಂಚಾಮೃತಅಮೃತಪಡಿಗಂಧೋಪ
[32]ಸೋಪಚಾರಕ್ಕಂಖಂಡಸ್ಫುಟ[ತ]ಜೀರ್ಣ್ನೋ...ಕವೆಂದುಚಂದ್ರಾರ್ಕ್ಕತಾರಂಬರಂ
[33]ಕೊಟ್ಟನಡಸುವದತ್ತಿಹತ್ತಿಯಹೇಱು ೧ಂಕ್ಕೆ ಪಣ ೧ ಕೊಂಡಲ್ಲಿಹತ್ತಿಪಲ ೫ ಬಂ
[34]ಬಡೆಯುಮಳವೆ ೧ಂಕೆ ಪಣ ೧ ಅರಸಿನದಹೇಱು ೧ಂಕ್ಕೆ ಪಣ ೧ ಬೆಲ್ಲದಹೇ
[35]ಱು ೧ಂಕ್ಕೆ ಪಣ ೧ ಓಲೆಯುಮಳವೆ ೧ಂಕೆ ಪಣ - ಉಪ್ಪಿನಹೇಱು ೨ಂಕೆ ಪಣ ೧
[36]ದವಸದಹೇಱು ೨ಂಕೆ ಪಣ ೧ ಅಡಕೆಯುಹೇಱು ೧ಂಕೆ ಪಣ ೨ ಮೆಣಸಿನಹೇಱು
[37]೧ಂಕೆ ಪಣ ೨ ಮಿಲಕ್ಕಿಯುಹೇಱು ೧ಂಕ್ಕೆ ಪಣ ೨ ಕಂಬಳಿಯುಮಳವೆ ೧ಂಕೆ ಪಣ . . ಗೂ
[38]ಲಮಳವೆ ೧ಂಕಂ ಪಣ ೨ ಸಂಭಾರದಹೇಱು ೧ಂಕೆ ಪಣ ೨ ಸೀಮೆಯುಮಳವೆ ೧ಂಕೆ ಪಣ . .
[39]ಕುದುರೆಯುಕೊಟ್ಟಲ್ಲಿಪಣ ೧ ಕೊಂಡಲ್ಲಿಪಣ ೧ ಟಂಣ್ಣ . . ನಡಿಗೆಗೆಸೂ ೨ ಕಂಚಿಕೆ . . . .
[40]ರಿಯಲಿಗದೆಖ ೩ ಕೆಯಖ ೧ ರಾಜಗಟ್ಟದಸ . . . . . .
[41]ಅಡಕೆಎಲೆಯುಹೇಱಿಂಗೆ . . . ವೊಳಗೆ ೧ ಮೆಣಸಿನಹೇಱಿಂಗೆ . . . . . .
[42]ಱಂಗೆವೂ ೧ .ಡೆಗೆಯುಹೇಱಿಂಗೆಸಾ ೧ ದವಸದಹೇಱಿಂಗೆ . . ...
[43]ವೂ ೧ ಅರಿಸಿನದಹೇಱಿಂಗೆವಾ ೧ ಇವುಮೊದ . . . . . . . .
[44]ಂಬುಮುಕಾಣನಹೇಱು . . ಎತ್ತಿನಹೇಱು . . ಕತ್ತೆ . . . . . .
[45] . . ದ . . . . ಹರೆಲ್ಲರನುಕೂಡಿರಕ್ಷಿಸುವದುಹಲರುಮಾಡಿದ . . . .
[46]ಲುನೆನಪಾ . ತಂನಕಾಲದಲುಳ್ಳ ೨೧ ತಲೆಯುಪಿತೃಗ . ಳ . . . . . .
[47]. ಗಂಗೆಯತಡಿಯಲು . . ಕಣ . ಂಕೊ . . ಪಹಲರುಮಾಡಿದ . ...

(ಮುಂದೆ ಹೋಗಿದೆ)

## 32

ಕಸಬಾ ಹೋಬಳಿ ದರ್ಗಾಪುರದ ಬಂಡೆಮೇಲೆ.

[1]ಸ್ವಸ್ತಿಶ್ರೀಜಯಕಾಮನ್ವೀರಲಬ್ಧ ವೀ* | [2]ನತತಲೆಮಂಡಿನಿಂರಿ | [3]ತೊಮ್ಮಭತ್ತೆಂಟವರಕಟಿದ

## 33

ಅದೇ ಹೋಬಳಿ ಶಿವಪುರದ ಲಕ್ಷ್ಮೀರಮಣಸ್ವಾಮಿಯ ದೇವಸ್ಥಾನದಲ್ಲಿ.

[1]ಸುಭಕೃತುಸಂವತ್ಸರದಕಾರ್ತಿಕಬ ೫ಲು ಶಿವಪುರದ ... ಮಾಡಿಸಿ | [2]ದರೇವ

## 34

ಅದೇ ಗ್ರಾಮದ ಸಂಜೀವನ ಹೊಲದಲ್ಲಿ.

[1]ಸ್ವಸ್ತಿಶ್ರೀವಿಜಯಾಭ್ಯುದಯಶಾಲಿವಾಹನಶಕ ೧೪೬೭ ಕ್ಕೆಸ
[2]ಲ್ಲುಹರಾಕ್ಷಸಸಂವತ್ಸರದಜೇಷ್ಠಶು ೫ ಲ್ಲುಶ್ರೀಮತುಶಿವಪುರ | [3]ರಜಗನಾಥನಾಯಕ ... ಕರಗದೇವರಿಗೆ ...

## 35

ಅದೇ ಗ್ರಾಮದ ಮಕ್ಕಾನಿನಲ್ಲಿ.

[1]ಶಾಲಿವಾಹನಶಕ ೧೪೬೭ ಕ್ಕೆಸಲ್ಲುಹರಾಕ್ಷಸಸಂವತ್ಸರಜೇಷ್ಟ | [2]ಶುದ್ಧ ೫ ಲ್ಲು .........

---

* ನಾಗರಾಕ್ಷರದಲ್ಲಿವೆ ಇದೆ.

## 36

### ಆದೇ ಗ್ರಾಮದ ಕೆರೆಯ ಕೋಡೀಬಳಿ.

ಶಾಲಿವಾಹನಶಕ ೧೨೫೧ ಕ್ಕೆ ಸಲ್ಲುಹವಿಭವಸಂವತ್ಸರಶ್ರಾವಣ | [2]ಮಾಸ ೧೫ ನೇ ಶುಕ್ರವಾರ

## 37

### ಆದೇ ಗ್ರಾಮದಲ್ಲಿ ಕರಿಗಿರಿಯ ಹೊಲದಲ್ಲಿ.

[1]ಶ್ರೀಶಾಲಿವಾಹನಶಕ

[2]೧೨೩೩ನೇ ಖರಸಂವತ್ಸರದ

[3]ಶ್ರಾವಣಶು। ೩ ಶುಕ್ರವಾರದಲ್ಲು

[4]ರಾಜನರೇಂದ್ರಭೂಪಾ

[5]ಲರುರಾಜ್ಯವಂ

[6]ಗೈದು . . . .

. . . .

## 38

### ಅದೇ ಗ್ರಾಮದ ಅಜ್ಜಪ್ಪನ ಹೊಲದಲ್ಲಿ.

[1]ಸ್ವಸ್ತಿಶ್ರಿಯಂಶಕವರು

[2]ಷಂಗಳು ೧೨೫೧ ನೆಯ

[3]ವಿಭವಸಂವತ್ಸರದಶ್ರಾ

[4]ವಣಮಾಸಶು ೧೫ ರಲು

[5]ಶ್ರೀವೀರಗಂಗಪಶಸ್ತಿಶ್ರೀ

[6]ಯಶಪ್ರತಾಪಚಕ್ರವ

[7]ರ್ತಿಹೊಯಿಸಣಾಶ್ರೀವಂ

[8]ಯಲಳಪರ್ಸರುಪ್ವಣ್ಣಾಡ

[9]ಯಪತ್ತನಾಡವರಸಂ

[10]ಕಥಾವಿನೋದದಿಂರಾಜ್ಯಂ

[11]ಗೆಯ್ಯುತ್ತಿಶಳಯೆಸಪ

[12]ಯಪ್ರಧಾನಂ . . . .

[13]ವರಹರೇಸ್ವರ . . ಯದ

[14]ಂಗ . . . . ಆಹಾರನು

[15] . . . ಗೊಟ್ಟಂ

## 39

### ಆದೇ ಹೋಬಳಿ ಅರಳಮಲ್ಲಿಗೆ ಗ್ರಾಮದಲ್ಲಿ.

[1]ಸ್ವಸ್ತಿಶ್ರೀಮನ್ಮಹಾಮಂಡಲೇಶ್ವರಂ। ಅರಿರಾಯವಿಬಾಡಬಾಸಿಗೆ

[2]ತಪ್ಪುವರಾಯರಗಂಡಶ್ರೀವೀರಬುಕ್ಕಂಣವಡಿಯರು

[3]ಪೃಥ್ವೀರಾಜ್ಯಂಗೈಯುವಶಕವರುಷ ೧೨೮೯ ನೆಯ

[4]ಪ್ಲವಂಗಸಂ । ಕಾರ್ತಿಕಶು ೧ ನೋ ಶ್ರೀಮನ್ಮ

[5]ಹಾಸಾಮಂತಾಧಿಪತಿಮೂವರುರಾಯರಗಂಡನಾಡು

[6] . . . . ಯಕನಮಕ್ಕಳುಬೊಮ್ಮಯ್ಯನಾಯಕರುತಿ -

[7]ಣಪ್ಪನವರುಶ್ರೀಮನ್ಮಹಾಹುಲುಕಡಿನಾಡಪ್ರಭುಬುಮ್ಮರಳ

[8]ಕೋಟಗಾಡತನವಂ

## 40

ಹೊನ್ನಾವಾರದ ಹೋಬಳಿ ಗಂಡ್ರಗೊಳ್ಳೀ ಪುರದಲ್ಲಿ.

1 ಶುಭಮಸ್ತು ಸ್ವಸ್ತಿಶ್ರೀವಿಜಯಾಭ್ಯುದಯಶಾಲಿವಾ
2 ಹನಶಕವರುಷ ೧೪೬೪ ನೇಯಪ್ಲವಸಂವತ್ಸರದವೈಶಾ
3 ಖಶು ೧೫ ಪುಣ್ಯಕಾಲದಲ್ಲುಶ್ರೀಮತುಗಂಡ್ರಗೊಳ್ಳಿದ
4 ಳವಾಯಿಸೋಣಪ್ಪನಾಯಿಕರಮಕ್ಕಳುಭೈರಪ್ಪನಾ
5 ಯಿಕರುಶಿವಗಂಗೆಯಮೇಲಣಗವಿಯಸಿಂಹಾಸನದ
6 ಮಲೆಯಕಾಂತದೇವರಿಗೆಕೊಟ್ಟಧರ್ಮಶಾಸನದಕ್ರಮ
7 ವೆಂತೆಂದರೆಶ್ರೀಪ್ರರಮಹಾರಾಜಾಧಿರಾಜರಾಜಪರಮೇ
8 ಶ್ವರಶ್ರೀವೀರಪ್ರತಾಪಶ್ರೀವೀರನರಸಿಂಗದೇವಮಹಾರಾ
9 ಯರುಸುಖರಾಜ್ಯಂಗೈವುತ್ತಿರಲುಶ್ರೀವೀರನರಸಿಂಗದೇ
10 ವರುಮಹಾರಾಯರುನಮಗೆನಾಯಕತನಕ್ಕೆಪಾಲಿಸಿ
11 ದಹುಲುಕುಡಿನಾಡೊಳಗಣಹಣಪೆಯಸೀಮೆಗೆಸಲುವಶಿಂ
12 ಪಾಡಿಪುರದಸೀಮೆಯೊಳಗಣಭೂಮಿಯಾಗಿದ್ದ
13 ಹೊಲವನ್ನೂ ಒಂದುಕುಂಟೆಯನ್ನೂ ನಾವುನಿಮಗೆ
14 ನರಸಿಂಗದೇವಮಹಾರಾಯರಿಗೆಧರ್ಮವಾಗಲಿಯೆಂದು
15 ಗಂಡರಗೊಳ್ಳೀದಳವಾಯಿಸೋಣಪ್ಪನಾಯಕರಮ
16 ಕ್ಕಳುಭೈರಪ್ಪನಾಯಕರುಗಂಡ್ರಗೊಳ್ಳೀಪುರವೆಂಬದನ್ನ
17 ಮೊದಲುದಾನಪೂರ್ವಕವಾಗಿದಾನವನ್ನೆರದ್ದುಕಾಯಂ ।
18 ಆಗಂಡ್ರಗೊಳ್ಳೀಪುರದಚತುಸ್ಸೀಮೆಯವಿವರಾ । ಆ
19 ಗೊಂಡ್ರಗೊಳ್ಳೀಪುರದಮೂಡಲುಇಸ್ತೂರಮೇರೆ
20 ಟೆಂಕಲುಹೊನ್ನಾವಾರೆಂಪಾಡಿಪುರದಮೇರೆಆಗಂ
21 ಡ್ರಗೊಳ್ಳೀಪುರದಪಡವಲು ಶಿಂಪಾಡೀಪುರದಕೆರೆಯ
22 ಕಟ್ಟೆಆಗಂಡ್ರಗೊಳ್ಳೀಪುರಕ್ಕೆಬಡಗಲುಹೆಜ್ಜಾಜಿ
23 ಶಾಕಲದೇವನಪುರದಮೇರೆಆದರೊಳಗಾದದ್ದು
24 ಸರಾಮಕ್ಷೇತ್ರನಿಧಿನಿಕ್ಷೇಪಜಲಪಾಷಾಣಅಕ್ಷೀ
25 ಣಿಆಗಾಮಿಸಿದ್ಧಸಾಧ್ಯಂಗಳೆಂಬಅಷ್ಟಭೋ
26 ಗತೇಜಸ್ವಾಮ್ಯವನ್ನೂಗಂಡರಗೊಳ್ಳೀಸೋಣಪ್ಪ
27 ನಾಯಿಕರಮಕ್ಕಳುಭೈರಪ್ಪನಾಯಿಕರುಈಗಂಡ್ರ
28 ಗೊಳ್ಳಿಯಪುರವನ್ನುಶ್ರೀವೀರನರಸಿಂಗದೇವಮ
29 ಹಾರಾಯರಿಗೆಧರ್ಮವಾಗಿಶ್ರೀಮತುಗಂಡರಗೊ
30 ಳ್ಳೀದಳವಾಯಿಸೋಣಪ್ಪನಾಯಿಕರಮಕ್ಕಳು
31 ಭೈರಪ್ಪನಾಯಿಕರುಶಿವಗಂಗೆಯಮೇಲಣಗವಿ
32 ಸಿಂಹಾಸನದಮಲೆಯಕಾಂತದೇವರಿಗೆಶಿಷ್ಯಪಾ
33 ರಂಪರೆಯಾಗಿಆಚಂದ್ರಾರ್ಕಸಾಕ್ಷಿಗಳಾಗಿ
34 ವಪೂಜೆಯಂಮಾಡಿಕೊಂಡುಸುಖದಿಂದಾಅನು
35 ಭವಿಸುವದುಯೆಂದುಕೊಟ್ಟಪುರಧರ್ಮಶಾಸನ ॥
36 ॥ ಶ್ಲೋ ॥ ದಾನಪಾಲನಯೋರ್ಮಧ್ಯೇ । ದಾನಶ್ರೇಯೋನ್ನ
37 ಪಾಲನಂ । ದಾನಾಸ್ವರ್ಗಮವಾಪ್ನೋತಿ । ಪಾಲನಾದಚ್ಯುತಂ
38 ಪದಂ ॥ ಸ್ವದತ್ತಾದ್ವಿಗುಣಂಪುಣ್ಯಂ । ಪರದತ್ತಾನು
39 ಪಾಲನಂ । ಪರದತ್ತಾಪಹಾರೇಣ । ಸ್ವದತ್ತಂನಿಷ್ಫಲಂಭವೇತ
40 ॥ ಸ್ವದತ್ತಾಂಪರದತ್ತಾಂವಾಯೋ । ಹರೇತಿವಸುಂ
41 ಧರಾ । ಷಷ್ಟಿರ್ವರ್ಷಸಹಸ್ರಾಣಿ । ತ್ರಿಷ್ಠಾಯಾಂಜಾ
42 ಯತೇಕ್ರಿಮಿ ॥

## 41

ಅದೇ ಗ್ರಾಮದಲ್ಲಿ ಬಸವನ ಗುಡಿಗೆ ದಕ್ಷಿಣ.

ಪ್ರಮಾಣ 6′ 6″ × 2′

1 ಶುಭಮಸ್ತು ಸ್ವಸ್ತಿಶ್ರೀವಿಜಯಾಭ್ಯುದಯ-ಶಾಲಿವಾಹನಶಕವರು
2 ಷದ ೧೪೮೪ನೆಯಶುಕ್ಲಸಂವತ್ಸರದವಯಿಶಾಖಶು ೧ ಗಪು
3 ಣ್ಯಕಾಲದಲುಶ್ರೀಮತುಗಂಡರಗೊಳಿದಳವಾಯಿಸೋಣ
4 ಪನಾಯಕರಮಕ್ಕಳುಬಯಿರಪನಾಯಕರೂಶಿವಗಂಗೆಯ
5 ಮೇಲಣಗವಿಯಸಿಂಹಾಸನದಮಲೆಯ . . . . ಕೊಟ
6 ಧರ್ಮಸಾಸನದಕ್ರಮವೆಂತೆಂದರೆಶ್ರೀಮಂಮಹಾರಾಜಾಧಿರಾಜ
7 ರಾಜಪರಮೇಶ್ವರಶಿವೀರಪ್ರತಾಪಶ್ರೀವೀರನರಸಿಂಗದೇವಮ
8 ಹಾರಾಯರುಪ್ರಿಥ್ವೀರಾಜ್ಯಂಗೆಯುತ್ತಿರಲುಶ್ರೀವೀರನರಸಿಂಗ
9 ದೇವಮಹಾರಾಯರೂನಮಗನಾಯಕತನಪಾಲಿಸಿದಹು
10 ಲುಕಡಿನಾಡೊಳಗಣಹಣಬೆಯಸೀಮೆಗೆಸಲುವಗಂಡ್ರ
11 ಗೊಲಿಪುರದಶೀಮೆಯೊಳಗಣಭೂಮಿಯಾಪೇವಹೊ
12 ಲವನುವೊಂದುಕುಂಟೆಯನ.ನಾಉನಿಮಗೆನರ
13 ಸಿಂಗದೇವಮಹಾರಾಯರಿಗೆಧರ್ಮ್ಮವಾಗಲಿಯಂ
14 ದುಗಂಡರಗೊಳಿದಳವಾಯಿಸೋಣಪ್ಪನಾಯಕರಮಕ್ಕ
15 ಳುಬಯಿರಪ್ಪನಾಯಿಕರುಗಂಡರಗೊಳೀಪುರವೆಂಬಪ್ರತಿ
16 ನಾಮದೇಯಸರ್ವಮಾನ್ಯಕವಾಗಿದಾರೆಯನೆರೆದುಕೊಟೆಉ

